ತಿಂಗಳ ಪತ್ರಿಕೆ ಅಕ್ಟೋಬರ್ 1992

★ ಆಪ್ರಾಬೆನ್

★ ಹಿತಶತ್ರು

★ ಮಯೂರಿ

★ ಗೋರಿ

# ಮಾನಸ

ಸಂಪುಟ : ೬ ಸಂಚಿಕೆ : ೧೦

ಅಕ್ಟೋಬರ್ - ೧೯೯೨

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯಿತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

ಬಿಡಿ ಪ್ರತಿ : **2 ರೂ.**
ಸೂಚನೆ : ವಾರ್ಷಿಕ ಚಂದಾ : **20 ರೂ.**
ಆಜೀವ ಚಂದಾ : **250 ರೂ.**
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ.ಓ.
ಮೂಲಕ ಸ್ವೀಕರಿಸಲಾಗುವುದು.


**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



## ಸಂಪಾದಕೀಯ

"ನಾನೆಷ್ಟು ಕಾಲ ಮನೆಯಲ್ಲೇ ಕೂತು ಆತನ ಸಾವನ್ನೇ ನೆನೆದು ಗೋಳಾಡಲಿ ? ಅತ್ತು ಅತ್ತು ಆತನನ್ನು ಹಿಂದಕ್ಕೆ ತರಲು ಸಾಧ್ಯವಿಲ್ಲ. ಆತನ ಹೋರಾಟವನ್ನೂ ಮುಂದುವರೆಸುವುದೇ ಆತನಿಗೆ ಸಲ್ಲಿಸಬೇಕಾಗಿರುವ ಕಾಣಿಕೆ. ಮನೆಯಿಂದ ಹೊರಬಂದು ಕಾರ್ಮಿಕರ ಜತೆ ಸೇರಿಕೊಂಡಾಗ ಮಾತ್ರ ಇದನ್ನು ಮಾಡಲು ಸಾಧ್ಯವಷ್ಟೆ !" ಹೀಗೆ ಹೇಳಿದವರು ಆಶಾ ಗುಹಾ ನಿಯೋಗಿ, ಒಂದು ವರ್ಷದ ಹಿಂದೆಯಷ್ಟೇ ಅಮಾನುಷ ಹತ್ಯೆಗೆ ಒಳಗಾದ ಅಪರೂಪದ ಕಾರ್ಮಿಕ ನಾಯಕ ಶಂಕರ ಗುಹಾ ನಿಯೋಗಿಯವರ ಪತ್ನಿ. ಮಧ್ಯ ಪ್ರದೇಶದ ಬಿಲಾಯ್ ಆಸುಪಾಸಿನ ಛತ್ತಿಸ್‌ಗರ್ ಮುಕ್ತಿ ಮೋರ್ಚಾ ಚಳವಳಿಯ ಜೀವಾಳವಾದ 6,000ಕ್ಕೂ ಹೆಚ್ಚು ಕಾರ್ಮಿಕರು ತಮ್ಮ ಯೂನಿಯನ್ ಕಛೇರಿಯಲ್ಲಿ ಪ್ರತಿ ದಿನ ಸಾಂಕೇತಿಕವಾಗಿ ದೀಪ ಹಚ್ಚುವ ಮೂಲಕ, ನಿಯೋಗಿ ಹಚ್ಚಿದ್ದ ಚಳವಳಿಯ ಜ್ವಾಲೆಯನ್ನು ಜೀವಂತರಾಗಿಸಿಕೊಂಡಿದ್ದಾರೆ ನಿಜಾರ್ಥದಲ್ಲೂ, ಸುಂದರಲಾಲ್ ಪಟ್ವ ಸರಕಾರ ಮತ್ತು ದೊಡ್ಡ ಕೈಗಾರಿಕೋದ್ಯಮಿಗಳ ಒಂದಾದ ಶಕ್ತಿಯ ವಿರುದ್ಧದ ಹೋರಾಟದ ತೀವ್ರತೆಯನ್ನು ಉಳಿಸಿಕೊಂಡು ಹೋಗುವದರಲ್ಲಿ ಸಫಲರಾಗಿದ್ದಾರೆ ಅವರು ಈವರೆಗೂ ಈಗವರ ಭರವಸೆಯ ಸಂಕೇತ ಹತ್ಯೆಗೊಳಗಾದ ತಮ್ಮ ನಾಯಕನ ವಿಧವಾ ಪತ್ನಿ ಆಶಾ.

ನಾಯಕ ಸ್ಥಾನದ ಗಂಡನ ಸಾವಾದಾಗ, ಆತನ ಸ್ಥಾನಕ್ಕೆ ಹೆಂಡತಿಯೇರುವುದು ಅಥವಾ ಏರಿಸಲು ಪ್ರಯತ್ನಿಸುವುದು ತುಂಬಾ ರೂಢಿತವಾಗಿರುವ ವಿಚಾರ ಮನೇಕಾ ಸೋನಿಯಾರಿಂದ ಹಿಡಿದು ಆಶಾ ನಿಯೋಗಿಯವರೆಗೂ ಇದು ಸತ್ಯವಾಗುತ್ತದೆ. ಗಂಡನ 'ಸಂಕೇತ'ವಾಗಿ ಹೆಂಡತಿಯನ್ನೂ ಎತ್ತಿ ಹಿಡಿಯುವುದು ಒಂದು ಸಮರ್ಥ ರಾಜಕೀಯ ತಂತ್ರವಾಗಿ ಬಳಕೆಯಾಗುತ್ತದೆ. ಈ 'ವಿಧವಾ ಪತ್ನಿ' ಪರಿಕಲ್ಪನೆ ವಿಲಕ್ಷಣವಾದದ್ದು. ಭಾವನಾತ್ಮಕ ಸಂಕೀರ್ಣತೆಗಳು ಇದಕ್ಕೆ ಆಯಸ್ಕಾಂತದ ಸೆಳೆತವಿದೆ. ಛತ್ತಿಸ್‌ಗರ್ ಮುಕ್ತಿಮೋರ್ಚಾದಂತ ಸತ್ವಪೂರ್ಣ

ಚಳವಳಿಯೂ ಇದೇ ಜನಪ್ರಿಯ ಜಾಡನ್ನು ತುಳಿಯಬೇಕಾಯಿತೇ ಎಂದು ಕೇಳಿಕೊಳ್ಳಬೇಕಾಗುತ್ತದೆ.

ಆದರೆ, ಗಿರಿಜನ ಮಹಿಳೆ ಆಶಾಗೆ ಹೋರಾಟದ ಹಾದಿಯೇನೂ ಹೊಸತಲ್ಲ. ನಿಯೋಗಿ ಬಹುಕಾಲ ಕಂಬಿಗಳ ಹಿಂದೆ ಇದ್ದಾಗ ಆಶಾ ಬೀದಿಗಿಳಿದು ಚಳವಳಿಯ ನಾಯಕತ್ವ ವಹಿಸಿದ್ದರು. ಮತ್ತೆ ತಮ್ಮ ಮೂರು ಮಕ್ಕಳ ಸಂಪೂರ್ಣ ಜವಾಬ್ದಾರಿ ಹೊತ್ತು ಮನೆ ಸೇರಿದ್ದರು. ತಮ್ಮ ಇಂದಿನ ಸ್ಥಿತಿಯ ಬಗ್ಗೆ ಆಶಾಗೆ ಭ್ರಮೆಗಳಿಲ್ಲ. ತನ್ನ ನಾಯಕತ್ವದ ಮಿತಿಗಳ ಬಗ್ಗೆ ಆಕೆಗೆ ಅರಿವಿದೆ. ತನ್ನ ಪತಿಯ ಎರಡು ದಶಕಗಳ ಸತತ ಶ್ರಮದ ಫಲವೇ ತನ್ನನ್ನು ಜನ ಗಣನೆಗೆ ತೆಗೆದುಕೊಳ್ಳುವಂತೆ ಮಾಡಿರುವುದು ಎನ್ನುವುದು ಈ 'ವಿಧವಾ ಪತ್ನಿ'ಗೆ ಮನವರಿಕೆಯಾಗಿದೆ.

ನಿಯೋಗಿಯ ಸಾವಿನಿಂದ ತನಗರಿಯದೇ ಇದ್ದಂತೆ ಬದುಕಿನ ಮುಖಗಳ ಪರಿಚಯ ಆಶಾಗಾಗಿದೆ. ಪಟ್ಟ ಸರಕಾರದ ಬೆಂಬಲ ಇಲ್ಲದೆ ನಿಯೋಗಿಯನ್ನು ಕೊಲ್ಲಲು ಸಾಧ್ಯವಾಗುತ್ತಲೇ ಇರಲಿಲ್ಲ ಎಂಬುದು ಈಕೆಯ ದೃಢಾಭಿಪ್ರಾಯ. ಔಪಚಾರಿಕ ಶಿಕ್ಷಣದ ಲವಲೇಶವೂ ಇಲ್ಲದ ಕೂಲಿಕಾರ ಕುಟುಂಬದ ಹೆಣ್ಣು ಆಶಾ ತನ್ನ ಗಂಡನ ಸಾವಿಗೆ ಪ್ರತೀಕಾರ ತೆಗೆದುಕೊಳ್ಳುವ ದೃಢನಿರ್ಧಾರ ಹೊಂದಿದ್ದಾರೆ – ಅದು ಆತ ಹುಟ್ಟುಹಾಕಿದ ಚಳವಳಿಯನ್ನೂ ಜೀವಂತವಾಗಿ ಮುಂದುವರೆಸಿ ಯಶಸ್ವಿಯಾಗಿಸುವುದರ ಮೂಲಕ. ಈಕೆಯ ಹೋರಾಟದ ಅಸ್ತಿತ್ವವಿರುವುದೇ ನಿಯೋಗಿ ಇಟ್ಟುಕೊಂಡಿದ್ದ ನಂಬಿಕೆಯ ಮೇಲೆ 'ಹೋರಾಟದ ಮೂಲಕವಷ್ಟೇ ಬೇಡಿಕೆಗಳು ಕೈಗೂಡುವುದು ಸಾಧ್ಯ.'

ಕಾವಿ–ಖಾಕಿಗಳ ನಾಡಿನಲ್ಲಿ 'ಮಾತೆ'ಯಾಗಿ ಪೂಜಿತಗೊಂಡ ''ಶಕ್ತಿ ದೇವತೆ' ತನ್ನ ಶಕ್ತಿಯ ಇನ್ನೊಂದು ಮುಖ ತೆರೆದಿಟ್ಟು 'ಆರಾಧಕ'ರನ್ನು ದಿಗ್ಭ್ರಮೆಗೊಳಿಸಿದ್ದಾಳೆ. ಆಕೆಗೆ ನಮ್ಮೆಲ್ಲರ Solidarity ಇದೆ.

# ಆಪ್ರಾಬೆನ್

## ವರ್ಜೀನಿಯಾ ವುಲ್ಫ್

ಆಪ್ರಾಬೆನ್ (1640-89), ಬರವಣಿಗೆ ಮೂಲಕ ಬದುಕು ಸಾಗಿಸಿದ ಮೊದಲ ಮಹಿಳೆ ಎನ್ನಲಾಗಿದೆ (26ನೆ ವಯಸ್ಸಿನಲ್ಲಿ ಆಕೆ ವಿಧವೆಯಾದಳು).

ವರ್ಜೀನಿಯಾ ವುಲ್ಫ್‌ರ 'ಎ ರೂಮ್ ಆಫ್ ಒನ್ಸ್ ಓನ್' ಕೃತಿಯಲ್ಲಿ ಈ ಲೇಖಕಿಯ ಬಗ್ಗೆ ವಿವರಣೆ ಇದೆ. ಆ ಭಾಗದ ಅನುವಾದವನ್ನು ಇಲ್ಲಿ ನೀಡಲಾಗಿದೆ.

ಶ್ರೀಮತಿ ಆಫ್ರಾ ಬೆನ್‌ನಿಂದ, ಬದುಕಿನ ಹಾದಿಯಲ್ಲಿ ಬಹುಮುಖ್ಯ ತಿರುವಿನಲ್ಲಿ ಸಾಗಿದ್ದೇವೆ. ತಮ್ಮದೇ ಸಂತೋಷಕ್ಕಾಗಿ ಮಾತ್ರ ಓದುಗರು ಅಥವಾ ವಿಮರ್ಶೆ ಯಿಲ್ಲದೆ ತಮ್ಮ ಉದ್ಯಾನವನಗಳಲ್ಲಿ ತಮ್ಮ ಪುಸ್ತಕದ ಹಾಳೆಗಳ ಜತೆ ಮುಚ್ಚಿಹೋದ ಆ ಏಕಾಂಗಿ ಮಹಿಳೆಯರ ಯುಗವನ್ನು ಹಿಂದಕ್ಕೆ ಹಾಕಿದ್ದೇವೆ. ಪಟ್ಟಣಗಳಿಗೆ ಬಂದು ಬೀದಿಗಳಲ್ಲಿ ಸಾಧಾರಣ ಜನರ ಜತೆ ಮುಖಾಮುಖಿ ಯಾಗಿದ್ದೇವೆ.

ಶ್ರೀಮತಿ ಬೆನ್ ಮಧ್ಯಮವರ್ಗದ ಮಹಿಳೆ. ಜನ ಸಾಮಾನ್ಯರ ಹಾಸ್ಯ, ಉತ್ಸಾಹ ಹಾಗೂ ಸಾಹಸದ ಗುಣ ಗಳನ್ನು ಹೊಂದಿದ್ದಾಕೆ. ಪತಿಯ ಸಾವು ಹಾಗೂ ತನ್ನದೇ ಕೆಲವು ದುರದೃಷ್ಟಕರ ಸಾಹಸಗಳಿಂದಾಗಿ ತನ್ನ ಬುದ್ಧಿ ಮತ್ತೆಯಿಂದ ಬದುಕು ಸಾಗಿಸಬೇಕಾದ ಅನಿವಾರ್ಯ ಸಂದರ್ಭಕ್ಕೆ ಪಕ್ಕಾದವಳು. ಪುರುಷರ ಜತೆ ಸಮಸಮವಾಗಿ ಆಕೆ ಕೆಲಸ ಮಾಡಬೇಕಾಯಿತು. ಶ್ರಮದ ದುಡಿಮೆಯಿಂದ ತನ್ನ ಬದುಕು-ಸಾಗಿಸಲು ಸಾಕಷ್ಟು ಸಂಪಾದಿಸಿದಳು. ಈ ಅಂಶದ ಪ್ರಾಮುಖ್ಯತೆ ಆಕೆ ವಾಸ್ತವವಾಗಿ ಬರೆದದ್ದಕ್ಕಿಂತ 'ಎ ಥೌಸಂಡ್ ಮಾರ್ಟೈರ್ಸ್ ಐ ಹ್ಯಾವ್ ಮೇಡ್' ಅಥವಾ 'ಲವ್ ಇನ್ ಫಾಂಟಾಸ್ಟಿಕ್ ಟ್ರಿಯಂಫ್ ಸ್ಯಾಟ್' ನಂತಹ ಉತ್ಕೃಷ್ಟ ಕೃತಿಗಳಿಗಿಂತ ಹೆಚ್ಚಿನದು. ಏಕೆಂದರೆ ಇಲ್ಲಿ ಮನಸ್ಸಿನ ಸ್ವಾತಂತ್ರ್ಯ ಆರಂಭವಾಗುತ್ತದೆ. ಅಥವಾ ಕ್ರಮೇಣ ಮನಸ್ಸು ಬಯಸಿದ್ದನ್ನು ಬರೆಯುವಂತಹ ಮುಕ್ತತೆಯ ಸಾಧ್ಯತೆ ಸೃಷ್ಟಿಯಾಗುತ್ತದೆ. ಆಫ್ರಾ ಬೆನ್‌ನ ಈ ಸಾಧನೆಯಿಂದ ಹುಡುಗಿಯರು ತಮ್ಮ ತಂದೆ-ತಾಯಿ ಬಳಿ ಹೇಳಬಹುದು– "ನಿಮ್ಮ ಹಣವೇನೂ ಬೇಕಿಲ್ಲ ; ಲೇಖನಿಯಿಂದ ಹಣ ಸಂಪಾದಿಸಬಲ್ಲೆ". ನಿಜ ಹೇಳ ಬೇಕೆಂದರೆ ನಂತರ ಬಹುವರ್ಷಗಳವರೆಗೆ, "ಆಫ್ರಾಬೆನ್ ಬದುಕು ಸಾಗಿಸುವ ಮೂಲಕ" ಎಂಬ ಉತ್ತರ ಸಿದ್ಧವಿರು ತ್ತಿತ್ತು ! ಸಾವೇ ಉತ್ತಮ ! ಬಾಗಿಲನ್ನು ಎಂದಿಗಿಂತ ತೀವ್ರವಾಗಿ ಹಾಕಲಾಗುತ್ತಿತ್ತು. ಆ ಆಳವಾದ ಆಸಕ್ತಿಯ ವಿಷಯ, ಮಹಿಳೆಯರ ಪಾವಿತ್ರ್ಯಕ್ಕೆ ಪುರುಷರು ನೀಡುವ ಮೌಲ್ಯ, ಅವರ ಶಿಕ್ಷಣದ ಮೇಲೆ ಅದರ ಪರಿಣಾಮ ಚರ್ಚೆಗೆ ಅವಕಾಶ ಕಲ್ಪಿಸುತ್ತದೆ. ಗರ್ಟನ್ ಅಥವಾ ನ್ಯೂನ್‌ಹಾಮ್‌ನ ಯಾವುದೇ ವಿದ್ಯಾರ್ಥಿ ಅಧ್ಯಯನ ಮಾಡಲು ಇಷ್ಟ ಪಟ್ಟರೆ ಪುಸ್ತಕವೊಂದು ಸೃಷ್ಟಿಯಾಗು ತ್ತದೆ. ಸ್ಕಾಟಿಷ್ ಪ್ರಾಂತವೊಂದರಲ್ಲಿ ಕೌತುಮಯ ವಸ್ತು ಗಳ ಮಧ್ಯೆ ವಜ್ರಾಭರಣಭೂಷಿತೆಯಾಗಿ ಕುಳಿತ ಲೇಡಿ ಡಡ್ಲಿ ಪುಸ್ತಕದ ಮುಖಚಿತ್ರವಾಗಬಹುದು. ಲಾರ್ಡ್ ಡಡ್ಲಿ, ಅಭಿರುಚಿಗಳನ್ನು ಹೊಂದಿದ ಹಾಗೂ ಅನೇಕ ಸಾಧನೆಗಳ ಮನುಷ್ಯನಾಗಿದ್ದ. ಆತ ಕರುಣಾಮಯಿ, ಉದಾರಿ ಆದರೆ ಅತ್ಯಂತ ಚಂಚಲ ಸ್ವಭಾವದ ನಿರಂಕುಶಾಧಿಕಾರಿ. ಪರ್ವತ ಪ್ರದೇಶದ ಅತ್ಯಂತ ಒಳಭಾಗದ ಬೇಟೆ-ಗೃಹದಲ್ಲೂ ತನ್ನ ಪತ್ನಿ ಪೂರ್ಣಪೋಷಾಕು ತೊಟ್ಟಿರಬೇಕು ಎಂಬುದು ಆತನ ಆಗ್ರಹ ; ಕಣ್ಣುಕುಕ್ಕುವ ಆಭರಣಗಳು ಅವಳ ಮೈಮೇಲೆ ಕೋರೈರುತ್ತಿರಬೇಕು ಇತ್ಯಾದಿ. ಆತ ಆಕೆಗೆ ಎಲ್ಲವನ್ನೂ ನೀಡಿದ್ದ. ಆದರೆ ಯಾವುದೇ ಹೊಣೆಗಾರಿಕೆ ಎಂದೂ ನೀಡು ತ್ತಿರಲಿಲ್ಲ. ನಂತರ ಲಾರ್ಡ್ ಡಡ್ಲಿಗೆ ಪಾರ್ಶ್ವವಾಯು ಬಡಿಯಿತು. ಆಕೆ ಆತನ ಆರೈಕೆ ಮಾಡಿದಳು. ನಂತರ ಎಂದೆಂದೂ ಪೂರ್ಣ ಸಾಮರ್ಥ್ಯದೊಂದಿಗೆ ಆತನ ಆಸ್ತಿ ಪಾಸ್ತಿಗಳ ವ್ಯವಹಾರ ನೋಡಿಕೊಂಡಳು. ಆ ಬಗೆಯ ಚಂಚಲ ಮನದ ನಿರಂಕುಶತೆ ಹತ್ತೊಂಬತ್ತನೇ ಶತಮಾನ ದಲ್ಲೂ ಇತ್ತು ಎಂದು ಇತ್ತೀಚೆಗೆ ಲೇಡಿ ಡಡ್ಲಿ ನಿಧನಳಾದ ಸಂದರ್ಭದಲ್ಲಿ 'ದಿ ಟೈಮ್ಸ್' ಪತ್ರಿಕೆ ಬರೆದಿದೆ.

ವಿಷಯಕ್ಕೆ ವಾಪಸಾಗೋಣ. ಬಹುಶಃ ಕೆಲವು ಒಪ್ಪ

ಬಹುದಾದ ಗುಣಗಳ ತ್ಯಾಗದಿಂದ ಬರವಣಿಗೆ ಮೂಲಕ ಹಣ ಮಾಡಬಹುದು ಎಂಬುದನ್ನು ಆಫ್ರಾ ಬೆನ್ ತೋರಿಸಿ ಕೊಟ್ಟಿದ್ದಾಳೆ. ಹೀಗಾಗಿ ಕ್ರಮೇಣ ಬರವಣಿಗೆ ಎನ್ನುವುದು ಹುಚ್ಚುತನ ಅಥವಾ ಗೊಂದಲದ ಮನಸ್ಸಿನ ಪ್ರತೀಕವಲ್ಲದೆ ವ್ಯಾವಹಾರಿಕ ಪ್ರಾಮುಖ್ಯತೆಯನ್ನೂ ಗಳಿಸಿಕೊಂಡಿತು. ಪತಿ ಸಾಯಬಹುದು ಅಥವಾ ಕುಟುಂಬದ ಮೇಲೆ ಯಾವುದಾದರೂ ವಿಪತ್ತು ಎರಗಬಹುದು. ಹದಿನೆಂಟನೆ ಶತಮಾನ ಕಾಲಿಡುತ್ತಿದ್ದಂತೆ ನೂರಾರು ಮಹಿಳೆಯರು ತಮ್ಮ ವೇಷ ಭೂಷಣ ವೆಚ್ಚಕ್ಕೆ ಒಂದಷ್ಟು ಹಣ ಸೇರಿಸಲು ಅಥವಾ ಅನುವಾದಗಳು ಮತ್ತು ಅಸಂಖ್ಯ ಕೆಟ್ಟ ಕಾದಂಬರಿಗಳನ್ನು ಬರೆದು ಕುಟುಂಬಕ್ಕೂ ನೆರವಾಗ ತೊಡಗಿದರು.

> ಇಲ್ಲಿ ಮನಸ್ಸಿನ ಸ್ವಾತಂತ್ರ್ಯ ಆರಂಭವಾಗುತ್ತದೆ. ಅಥವಾ ಕ್ರಮೇಣ ಮನಸ್ಸು ಬಯಸಿದ್ದನ್ನು ಬರೆಯುವಂತಹ ಮುಕ್ತತೆಯ ಸಾಧ್ಯತೆ ಸೃಷ್ಟಿಯಾಗುತ್ತದೆ.

ಮಹಿಳೆಯರಲ್ಲಿ ಹದಿನೆಂಟನೆ ಶತಮಾನದ ಅಂತ್ಯ ಭಾಗದಲ್ಲಿ ಕಂಡುಬರುವ ಮನಸ್ಸಿನ ತೀವ್ರ ಚಟುವಟಿಕೆ ಚರ್ಚೆ, ಸಭೆಗಳು, ಶೇಕ್ಸ್‌ಪಿಯರ್ ಕುರಿತು ಪ್ರಬಂಧಗಳ ರಚನೆ, ಮಹಾಗ್ರಂಥಗಳ ಅನುವಾದ ಇವುಗಳಿಗೆಲ್ಲಾ ಬರವಣಿಗೆ ಮೂಲಕ ಮಹಿಳೆಯರು ಹಣ ಮಾಡಬಹುದು ಎಂಬ ಘನ ವಿಚಾರವೇ ಆಧಾರವಾಗಿತ್ತು.

ಹಣಸಿಗದಿದ್ದಲ್ಲಿ ಅಮುಖ್ಯವಾಗಬಹುದಾಗಿದ್ದಕ್ಕೆ ಹಣ ಘನತೆ ತಂದುಕೊಡುತ್ತದೆ. ಬರವಣಿಗೆಯ ತಹತಹ ಇರುವ ಮಹಿಳೆಯ ಬಗ್ಗೆ ಅಣಕದ ನಗೆ ಬೀಸಬಹುದು. ಆದರೆ ಅದರಿಂದ ಅವರ ಪರ್ಸ್‌ಗಳಲ್ಲಿ ಹಣ ತುಂಬುತ್ತ ದೆಂಬುದನ್ನು ಯಾರೂ ನಿರಾಕರಿಸಲಾಗದು.

ಹೀಗಾಗಿ, ಹದಿನೆಂಟನೆ ಶತಮಾನದ ಅಂತ್ಯಕ್ಕೆ ಒಂದು ಬದಲಾವಣೆ ಕಂಡು ಬಂತು.

ಇತಿಹಾಸವನ್ನು ಪುನರ್‌ರಚಿಸುವುದಿದ್ದಲ್ಲಿ, ಧರ್ಮ ಯುದ್ಧಗಳು ಅಥವಾ ಪ್ರೇಮಕ್ಕಾಗಿ ನಡೆದ ಯುದ್ಧ ಗಳಿಗಿಂತ ಇದನ್ನು ಪೂರ್ಣವಾಗಿ ವಿವರಿಸಬೇಕು. ಹೆಚ್ಚಿನ ಮಹತ್ವ ನೀಡಬೇಕು.

'ಪ್ರೈಡ್ ಅಂಡ್ ಪ್ರಿಜುಡೀಸ್' ಮುಖ್ಯವಾಗುವು ದಾದಲ್ಲಿ 'ಮಿಡ್ಲ್‌ಮಾರ್ಚ್' 'ವಿಲ್ಲೆಟ್' ಹಾಗೂ 'ವುದರಿಂಗ್ ಹೈಟ್ಸ್' ಮುಖ್ಯವಾಗುವುದಾದಲ್ಲಿ, ಪುಸ್ತಕ ಗಳು ಹಾಗೂ ಭಟ್ಟಂಗಿಗಳ ಜತೆ ತೋಟದ ಮನೆಯಲ್ಲಿ ಒಂಟಿಯಾಗಿರುವ ಶ್ರೀಮಂತ ಮಹಿಳೆ ಮಾತ್ರ ಬರವಣಿಗೆ ಆರಂಭಿಸಲಿಲ್ಲ ಎಂಬುದನ್ನು ಹೇಳಬೇಕು. ಆ ಪರಂಪರೆ ಸೃಷ್ಟಿಸಿದ ಮಹಿಳೆಯರಿಲ್ಲದೆ, ಜೇನ್ ಆಸ್ಟಿನ್, ಬ್ರಾಂಟೆ ಸೋದರಿಯರು ಅಥವಾ ಜಾರ್ಜ್ ಈಲಿಯಟ್ ಬರೆಯಲಾಗುತ್ತಿರಲಿಲ್ಲ. 'ಮಾರ್ಲೊ' ಇಲ್ಲದೆ ಶೇಕ್ಸ್‌ಪಿಯರ್ ಬರೆಯಲಾಗುತ್ತಿರಲಿಲ್ಲ. ಅಥವಾ ಚಾಸರ್ ಇಲ್ಲದೆ ಮಾರ್ಲೊಗೆ ಆಗುತ್ತಿರಲಿಲ್ಲ. ಅಥವಾ ನಾಲಿಗೆಯ ಸಹಜ ಒರಟುತನವನ್ನು ಕಡಿಮೆ ಮಾಡಿ ಹಾದಿ ನಿರ್ಮಿಸಿದ ಆ ಮರೆತು ಹೋದ ಕವಿಗಳು ಇಲ್ಲದಿದ್ದಲ್ಲಿ ಚಾಸರ್ ಬರೆಯಲಾಗುತ್ತಿರಲಿಲ್ಲ. ಮಹಾಗ್ರಂಥಗಳು ಎನ್ನುವುದು ಪ್ರತ್ಯೇಕವಾಗಿ ಒಂಟಿಯಾಗಿ ಸೃಷ್ಟಿ ಆಗುವಂತಹದ್ದಲ್ಲ. ಒಂದೇ ರೀತಿಯ ಅನೇಕ ವರ್ಷಗಳ ಚಿಂತನೆಯ ಫಲ ಅದು ಜನಸಾಮಾನ್ಯರ ಆಲೋಚನೆ, ಅನುಭವಗಳು ಈ ಒಂದು ಧ್ವನಿಯ ಹಿಂದೆ ಅಡಗಿರುತ್ತದೆ. ಫ್ಯಾನಿ ಬರ್ನಿ ಸಮಾಧಿಯ ಮೇಲೆ ಜೇನ್ ಆಸ್ಟಿನ್ ಹೂಮಾಲೆ ಇರಿಸಿರ ಬಹುದು, ಗ್ರೀಕ್ ಕಲಿಯಲು ಬೆಳಿಗ್ಗೆ ಬೇಗ ಏಳುವುದಕ್ಕಾಗಿ ಮಂಚಕ್ಕೆ ಗಂಟೆ ಕಟ್ಟಿ ಮಲಗುತ್ತಿದ್ದ ಎಲಿಜಾ ಕಾರ್ಟರ್ ಸ್ಮರಣೆಗೆ ಜಾರ್ಜ್ ಈಲಿಯಟ್ ಗೌರವ ಸಲ್ಲಿಸಿರಬಹುದು. ಆದರೆ ಎಲ್ಲಾ ಮಹಿಳೆಯರೂ ಒಟ್ಟಾಗಿ ತಮ್ಮ ಮನಸ್ಸುಗಳ ಅಭಿವ್ಯಕ್ತಿಯ ಹಕ್ಕು ಗಳಿಸಿಕೊಟ್ಟ ವೆಸ್ಟ್ ಮಿನಸ್ಟರ್ ಅಬೆಯಲ್ಲಿರುವ ಆಫ್ರಾ ಬೆನ್ ಸಮಾಧಿಯ ಮೇಲೆ ಹೂಗಳ ಸುರಿಮಳೆ ಸುರಿಯಬೇಕು. ಆಕೆಯ ನೆನಪು ಇಂದು ರಾತ್ರಿ ಹೀಗೆ ಹೇಳುವಂತೆ ನನಗೆ ಪ್ರೇರೇಪಿಸುತ್ತದೆ- 'ನಿಮ್ಮ ಬುದ್ಧಿಮತ್ತೆಯಿಂದ ವರ್ಷಕ್ಕೆ ಐದುನೂರುಗಳಿಸಿ'.

●

## ಹಿತಶತ್ರು

ವಿಪರೀತ ರಾಜಿಗುಣ, ನಿರಂತರ ಆತ್ಮಶೋಧನೆಯ ಕೊರತೆ ನಮ್ಮ ಬದ್ಧತೆಯನ್ನು ಪ್ರಶ್ನಿಸುವಂತೆ ಮಾಡಿ ಬಿಡುತ್ತದೆ. ಇದು ಮಹಿಳಾ ಪ್ರಶ್ನೆಗೆ ಅನ್ವಯಿಸುವುದಿಲ್ಲ ಎಂದೇನಲ್ಲ. ಗುಂಪಿನಲ್ಲೋ, ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡೋ, ವ್ಯಕ್ತಿಗತವಾಗಿಯೋ, ಹೇಗೋ ಒಂದು ರೀತಿಯಲ್ಲಿ ಮಹಿಳಾ ಚಳವಳಿಯ ಭಾಗವಾಗಿ ಕೆಲಸ ಮಾಡುತ್ತಿರುವ ನಾವೆಲ್ಲರೂ ಒಂದಿಲ್ಲ ಒಂದು ಸಂದರ್ಭ ದಲ್ಲಿ, ಒಂದಿಲ್ಲಾ ಒಂದು ರೀತಿಯಲ್ಲಿ ಪುರುಷ ಮೌಲ್ಯ ಗಳನ್ನೇ ಎತ್ತಿಹಿಡಿಯುತ್ತಾ ಅದನ್ನೇ ಚಿಂತನೆಯ ಕ್ರಮ ವನ್ನಾಗಿ ಮಾಡಿಕೊಂಡಿರುತ್ತೇವೆ. ಎಚ್ಚರಿಕೆಯಿಂದಿರ ಹೋದಾಗ ಸ್ತ್ರೀಪರವೆಂದು ಹೇಳಿಕೊಳ್ಳುವ ನಮ್ಮ ಹೋರಾಟಗಳು, ಚಿಂತನೆಗಳು ವಾಸ್ತವದಲ್ಲಿ ಪುರುಷ ಮನಸ್ಸನ್ನೇ ಬಿಂಬಿಸುತ್ತಾ, ಪುರುಷ ಬೆಂಬಲಿಯೇ ಆಗಿ ಬಿಡುತ್ತವೆ. ಇದು ನಿರಂತರ ಚಿಂತನೆಯ ಕೊರತೆಯಿಂದ ಅಪ್ರಾಜ್ಞಾಪೂರ್ವಕವಾಗಿ ಆದದ್ದೋ ಅಥವಾ ವಿಪರೀತ ರಾಜಿಗುಣದಿಂದಾಗಿ ಪ್ರಜ್ಞಾಪೂರ್ವಕವಾಗಿ ಆದದ್ದೋ ಎಂದು ಕೂಡ ಒಮ್ಮೊಮ್ಮೆ ಹೇಳಬರುವುದಿಲ್ಲ. ಇದರ ತೀವ್ರತೆಯ ಸ್ವರೂಪ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಹಂತಗಳಲ್ಲಿದ್ದು, ಒಟ್ಟಾರೆಯಲ್ಲಿ ಇದು ಮಹಿಳಾ ಚಳವಳಿಯೊಳಗೆ ತಣ್ಣಗೆ ಹಿತಶತ್ರುವಾಗಿ ಕೆಲಸ ಮಾಡು ತ್ತಿರುತ್ತದೆ. ನಾವಿನ್ನೂ ಹೆಚ್ಚು ಎಚ್ಚರಿಕೆಯಿಂದಿರ ಬೇಕಾಗುತ್ತದೇನೋ ಎಂಬ ಬೆರಗಿನಿಂದಲೇ ಕೆಲ ಉದಾಹರಣೆಗಳನ್ನೂ ಸ್ಯಾಂಪಲ್ಲಾಗಿ ಕೊಡುತ್ತಿದ್ದೇನೆ.

ಕೆಲ ದಿನಗಳ ಹಿಂದೆ ನಮ್ಮ ಜಿಲ್ಲೆಯ ಒಂದು ಸಣ್ಣ ಊರಿನಲ್ಲಿದ್ದೆ. ಹಳ್ಳಿಗಳಲ್ಲಿ ತಮ್ಮದೇ ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು ಕೆಲಸ ಮಾಡುತ್ತಿರುವ ಕೆಲ ಯುವಕ-ಯುವತಿಯರು ಭೇಟಿಯಾದರು. ಸಾಕಷ್ಟು 'ಪ್ರಗತಿಪರ' ಚಿಂತನೆಗೆ ಪಕ್ಕಾದ ಉತ್ಸಾಹೀ ತರುಣ-ತರುಣಿಯರು! ಹಾಗೆಯೇ ಹರಟುತ್ತಿದ್ದಾಗ, ತಮ್ಮ ಹಳ್ಳಿಗಳಲ್ಲಿನ Sc/St ಜನಾಂಗಗಳಲ್ಲಿ ಇತ್ತೀಚೆಗೆ ವರದಕ್ಷಿಣೆ ಪಿಡುಗು ಬಲವಾಗಿ ತಲೆಯೆತ್ತುತ್ತಿರುವುದಾಗಿಯೂ, ಹಿಂದೆ ಹಾಗಿರಲಿಲ್ಲ ವೆಂದೂ, ಇದು ಸಂಪೂರ್ಣ ಮಧ್ಯಮವರ್ಗಗಳ ಪ್ರಭಾವ ದಿಂದ ಉಂಟಾದುದಾಗಿಯೂ ದೃಢವಾಗಿ ಹೇಳುತ್ತಿದ್ದರು. ತಾವುಗಳು ಈ ವರದಕ್ಷಿಣೆ ಭೂತದ ವಿರುದ್ಧ ಜನಜಾಗೃತಿ ಮೂಡಿಸಲು ಪ್ರಯತ್ನಿಸುತ್ತಿರುವುದಾಗಿ, ಆ ದಿಸೆಯ ಪ್ರಯತ್ನದಲ್ಲಿ ತಾವು ತಯಾರಿಸಿರುವ ಪೋಸ್ಟರನ್ನು ತೋರಿಸಿದರು. ಪೋಸ್ಟರನ್ನು ನೋಡಿ ನಾನು ದಂಗಾಗಿ ಹೋದೆ.

ಕುಡುಕ ಗಂಡ. ಧನ ಪಿಶಾಚಿ ಅತ್ತೆಯರ ಕೈಯಲ್ಲಿ 'ಅಸಹಾಯಕ - ಅಮಾಯಕ' ಹೆಣ್ಣನ್ನು ಬೆಂಕಿಗೆ ಬಲಿಯಾಗಿಸುವುದು ಚಿತ್ರ. ಇಂತಹ ಅಮಾನುಷ ಕೃತ್ಯದ ವಿರುದ್ಧ ಹೋರಾಟಕ್ಕೆ ಕರೆಕೊಡುವ ಘೋಷಣೆ, ಚಿತ್ರ ವನ್ನು ಹೆಚ್ಚು ವಿವರಿಸುವದಾದರೆ : ದಢೂತಿ ಅತ್ತೆ ತನ್ನ ಮೈಗೊಪ್ಪುವ ವಡವೆಗಳನ್ನು ತೊಟ್ಟುಕೊಂಡು ನೋಟಿನ ಕಂತೆಯ ಕನಸು ಕಾಣುತ್ತಾ ಸೊಸೆಯನ್ನು ಸುಡುವಂತೆ ತನ್ನ ಬೆರಳಿನಿಂದಲೇ ನಿರ್ದೇಶಿಸುತ್ತಿದ್ದಾಳೆ! ಇತರ ಪುರುಷ ಪಾತ್ರಗಳು ಅವಳ ನಿರ್ದೇಶನವನ್ನನುಸರಿಸುತ್ತಿವೆ. ಅಂತೂ ಒಟ್ಟಾರೆಯಲ್ಲಿ ಇಡೀ ವರದಕ್ಷಿಣೆ ಸಮಸ್ಯೆಯ ಮೂಲವೇ ಅತ್ತೆಯಂತಹ ಹೆಂಗಸರು ಎಂದು ಈ ಪೋಸ್ಟರ್ ಸಾರುತ್ತದೆ. ಹೆಣ್ಣಿನ ಮೇಲಿನ ದೌರ್ಜನ್ಯಕ್ಕೆ ಹೆಣ್ಣನ್ನೇ ಸುಲಭವಾಗಿ ಬಳಸಿಕೊಳ್ಳುತ್ತಾ, ಸುಖವಾಗಿ ಅದರ ಫಲ ಪಡೆಯುವ ಪುರುಷ ವ್ಯವಸ್ಥೆಯನ್ನು ಪ್ರಶ್ನಿಸದ ಇಂತಹ ಅವಿಮರ್ಶಾತ್ಮಕ ಧೋರಣೆಗಳು ನಿಜಾರ್ಥದಲ್ಲಿ ಎಷ್ಟರ ಮಟ್ಟಿಗೆ ಸ್ತ್ರೀಪರ ಹೋರಾಟಕ್ಕೆ ಬೆಂಬಲವಾಗಬಲ್ಲುವು ಎಂದು ಚಿಂತಿಸತೊಡಗಿದೆ. ಜತೆಗೆ, ಬಲಿಪಶು ಅಮಾಯಕ ಸೊಸೆಯ ಬಟ್ಟೆಗಳು ಅಸ್ತವ್ಯಸ್ತ ವಾಗಿದ್ದು ಅವಳ ಅಂಗಾಂಗಗಳನ್ನು ಪ್ರಚೋದನಾ ರೀತಿ ಯಲ್ಲಿ ಎದ್ದು ಕಾಣುವಂತೆ ಚಿತ್ರಿಸಲಾಗಿತ್ತು.

"ಇದೊಂದು ಪುರುಷ ಮನಸ್ಸಿನ ಪೋಸ್ಟರು" ನಾನೆಂದೆ. ತರುಣ-ತರುಣಿಯರು ಸಿಟ್ಟು-ನಿರಾಸೆಗೊಂಡರು. ಭಾವೋದ್ವೇಗದ ಚರ್ಚೆಗೆ ತೊಡಗಿದರು. ಆತ್ಮ ಸಮರ್ಥನೆಯೇ ಪ್ರಬಲವಾಗಿದ್ದರೂ ಮರೆಯಲ್ಲಿ ಆತ್ಮ ಶೋಧನೆಯ ಸಣ್ಣ ಎಳೆಯಿದ್ದುದು ಗುರುತಿಸಬಹುದಾದ್ದ ರಿಂದ ನಿಧಾನವಾಗಿಯಾದರೂ ಚಿಂತಿಸಿಯಾರು ಅಂದು ಕೊಂಡು ಅಲ್ಲಿಂದ ಹೊರಟೆ.

ಕಳೆದ ವರ್ಷ ನಾವು ಕೆಲವರು ಮಹಿಳೆ ಮತ್ತು ಆರೋಗ್ಯವನ್ನು ಕುರಿತಂತೆ 'ಮಹಿಳಾ ದೃಷ್ಟಿಕೋನ'ದಿಂದ ಕೆಲವು ಪುಸ್ತಿಕೆಗಳನ್ನು ತಯಾರಿಸುತ್ತಿದ್ದೆವು. ಆ ಸರಣಿಯಲ್ಲಿ ಒಂದು 'ಸಂತಾನೋತ್ಪತ್ತಿ ಆರೋಗ್ಯ' (Reproductive Health)ವನ್ನು ಕುರಿತಾಗ ಪುಸ್ತಿಕೆ. ಸಂತಾನೋತ್ಪತ್ತಿಯಲ್ಲಿ ಅಡಗಿರುವ ವೈಜ್ಞಾನಿಕ ಸತ್ಯಗಳನ್ನು ಕಂಡುಕೊಳ್ಳುತ್ತಾ, ಸ್ತ್ರೀವಿರೋಧಿಯಾದ ಸುಳ್ಳು ನಂಬಿಕೆಗಳನ್ನು ಬಯಲುಮಾಡುತ್ತಾ ಹೋಗುವುದು ಮುಖ್ಯವಾಗಿ ಇಲ್ಲಿಯ ಕ್ರಮವಾಗಿತ್ತು. ಈ ಪುಸ್ತಿಕೆಗೆ ಮುನ್ನುಡಿ ಬರೆದುಕೊಡುವಂತೆ ಹತ್ತಾರು ವರ್ಷಗಳಿಂದ ಮಹಿಳಾ ಚಳವಳಿಯಲ್ಲಿ-ಅದೂ ವಿಶೇಷವಾಗಿ 'ಮಹಿಳೆ ಮತ್ತು ಆರೋಗ್ಯ'ದಲ್ಲಿ ಒಳಗೊಳ್ಳಿಸಿಕೊಂಡಿರುವ, ಸ್ತ್ರೀ ಪ್ರಜ್ಞೆಯ ಚಿಂತನೆಯಲ್ಲಿ ಪರಿಶ್ರಮವಿರುವ ಮಹಿಳೆಯೊಬ್ಬರನ್ನು ಕೇಳಿದೆವು. ಆಕೆ ಬರೆದ ಮುನ್ನುಡಿಯ ಒಂದು ಸಾಲು ಹೀಗಿತ್ತು : "ಲಿಂಗವನ್ನು ನಿರ್ಧರಿಸುವುದು ಪುರುಷ ಜೀನು (Gane)ಗಳೇ ಆದರೂ ಹೆಣ್ಣು ಮಗು ಹುಟ್ಟಿದಾಗ ಹೆಂಗಸನ್ನೇ ದೂಷಿಸಲಾಗುತ್ತದೆ..." ಇತ್ಯಾದಿ. ಅಂದರೆ ಆಕೆ ಹೇಳುತ್ತಿರುವುದರ ಅರ್ಥ ಹೆಣ್ಣು ಮಗುವು ಹುಟ್ಟಿದರೆ ಇಷ್ಟು ಕಾಲ ಹೆಂಗಸರನ್ನು (ಹೆತ್ತವರನ್ನು) ದೂಷಿಸುತ್ತಿದ್ದೆವು. ಇನ್ನು ಮೇಲೆ ಗಂಡಸರನ್ನು ದೂಷಿಸಬೇಕಾಗುತ್ತದೆ ಎಂತಾಗುತ್ತದಲ್ಲವೇ ?! ಹೆಣ್ಣು ಶಿಶು ಜನನದ ವಿರುದ್ಧ ವ್ಯವಸ್ಥಿತ ಸಮರವನ್ನೇ ಸಾರುತ್ತಿರುವ ಇಂದಿನ ಸ್ಥಿತಿಯ ಜತೆ ಇಷ್ಟು ಸುಲಭವಾಗಿ ರಾಜಿ ಮಾಡಿಕೊಂಡು ಬಿಟ್ಟರೆ ಹೇಗೆ ?

ವರ್ಷವೆರಡರ ಹಿಂದೆ ಬಿಜಾಪುರದಲ್ಲಿ ಸಂಪೂರ್ಣ ಸಾಕ್ಷರತಾ ಆಂದೋಲನ ನಡೆದಿದ್ದಾಗ ಪ್ರಗತಿಪರ ಮಹಿಳಾ ಸಂಸ್ಥೆಯೊಂದು ಗ್ರಾಮ್ಯದ ಮಹಿಳೆಯರನ್ನು ಪ್ರೇರೇಪಿಸುವ ಕಾರ್ಯದಲ್ಲಿ ತೊಡಗಿಕೊಂಡಿತ್ತು. ಅತ್ಯಂತ ಯಶಸ್ವೀ ಪ್ರೇರಕಿಯರೆಂದು 'ಖ್ಯಾತಿ' ಪಡೆಕೊಂಡ ಇವರು ತಮ್ಮ ಪ್ರೇರಣಾ ಕಾರ್ಯದಲ್ಲಿ ಪರಿಣಾಮಕಾರೀ ರೀತಿಯಲ್ಲಿ ಹಾಡು-ನಾಟಕಗಳನ್ನು ಬಳಸಿಕೊಂಡಿದ್ದರು. ಹೀಗೆ ಬಳಸಿಕೊಂಡ ಹಾಡುಗಳಲ್ಲಿ ಒಂದು ಹೀಗಿತ್ತು :

ಸಣ್ಣ ಹಿಡುವಳಿ ರೈತಣ್ಣ
ನೀ ಓದು ಬರಹ ಕಲಿಯಣ್ಣ
ಓದು ಬರಹ ಕಲಿಯಣ್ಣ ನೀ ಅಟ್ಟಹಾಸದೀ ಮೆರೆಯಣ್ಣ ॥

ಅಡಿಗೆ ಮನೆಯ ಅಕ್ಕವ್ವ
ನೀ ಮಕ್ಕಳಿಗೋದು ಕಲಿಸವ್ವ
ಮಕ್ಕಳಿಗೋದು ಕಲಿಸವ್ವ ನೀ ಚೊಕ್ಕ ಸಂಸಾರ
ಮಾಡವ್ವ ॥

ಪ್ರಚಲಿತ ಸ್ತ್ರೀ ವಿರೋಧೀ ಮೌಲ್ಯಗಳನ್ನೇ ಇದು ಭದ್ರ ಪಡಿಸುತ್ತಿರುವುದನ್ನು ಎತ್ತಿ ತೋರಿಸಿದಾಗ ತಾವು ಸ್ವಲ್ಪವೂ ಯೋಚಿಸದೆ ಈ ಹಾಡನ್ನು ಹೇಗೆ ಬಳಸಿಕೊಳ್ಳುತ್ತಿದ್ದೆವು ಎಂದು ಆಶ್ಚರ್ಯಪಟ್ಟರು. ಚಿಂತನಾಶೀಲ ಮೇಷ್ಟ್ರೊಬ್ಬರು ಈ ಹಾಡನ್ನು ಕಟ್ಟಿದ್ದರಿಂದ ಅದನ್ನು ಪರೀಕ್ಷಿಸುವ ಅಗತ್ಯವೇ ತಮಗೆ ಕಂಡು ಬಂದಿರಲಿಲ್ಲವೆಂದು ಹೇಳಿದರು.

ಈಗ್ಗೆ ಕೆಲ ದಿನಗಳ ಹಿಂದೆ ಗರ್ಭಕೋಶ ಬಾಯಿಯ (Cervix) ಕ್ಯಾನ್ಸರಿನ ಬಗ್ಗೆ ನುರಿತ ವೈದ್ಯೆಯೊಬ್ಬರೊಡನೆ ಕೆಲಸ ಮಾಡುತ್ತಿದ್ದೆ. ಗರ್ಭಕೋಶ ಬಾಯಿಯ ಕ್ಯಾನ್ಸರಿನ ಬಗ್ಗೆ ಸಾಧ್ಯವಿರುವ ವಿವರಣೆಗಳನ್ನು ಕೊಡುತ್ತಾ ಅದನ್ನು ತಡೆಗಟ್ಟುವಲ್ಲಿ ಗ್ರಾಮೀಣ ಹೆಂಗಸರಲ್ಲಿ ಅರಿವು ಮೂಡಿಸಿ ಪ್ರೇರೇಪಿಸುವ ಉದ್ದೇಶಕ್ಕಾಗಿ ತಯಾರಿಸುತ್ತಿದ್ದ ಸಚಿತ್ರ ಪುಸ್ತಿಕೆ ಅದು. ಅದರ ಒಂದು ಭಾಗ ಗರ್ಭಕೋಶ ಬಾಯಿಯ ಕ್ಯಾನ್ಸರಿಗೆ ಕಂಡು ಬಂದಿರುವ ವಿವಿಧ ಕಾರಣಗಳನ್ನು ಹೇಳುತ್ತದೆ. ಅದರಲ್ಲಿ ಒಂದು : ಗಂಡನಿಗೆ ಅನೇಕ ಲೈಂಗಿಕ ಸಂಬಂಧಗಳಿದ್ದರೆ, ಅವನೊಟ್ಟಿಗಿನ ಲೈಂಗಿಕ ಸಂಪರ್ಕದಿಂದ ಹೆಂಡತಿಗೆ ಈ ಕ್ಯಾನ್ಸರ್ ಬರುತ್ತದೆ. ಹಾಗೆಯೇ ಹೆಂಗಸರು ಅನೇಕ ಲೈಂಗಿಕ ಸಂಬಂಧಗಳನ್ನು ಹೊಂದಿದ್ದಾಗಲೂ ಈ ಕಾಯಿಲೆ ಬರುತ್ತದೆ. ಇದನ್ನು ಚಿತ್ರಮುಖೇನ ಅನಕ್ಷರಸ್ಥ ಹೆಂಗಸರಿಗೂ ಅರ್ಥವಾಗುವಂತೆ ಪುಸ್ತಿಕೆಯಲ್ಲಿ ತೋರಿಸಬೇಕು. ಇದೊಂದು ಮಹಿಳಾ ದೃಷ್ಟಿಕೋನದಿಂದ ತಯಾರಿಸುತ್ತಿದ್ದ ಪುಸ್ತಿಕೆಯಾದರೂ ಅನೇಕ ಲೈಂಗಿಕ ಸಂಬಂಧಗಳನ್ನು ಹೊಂದಿರುವ ಹೆಂಗಸು 'ವಿಲಾಸಿನಿ' ಯೆಂಬುದೇ ನಮ್ಮ ಆರ್ಟಿಸ್ಟ್‌ನಿಂದ ಮೊದಲ್ಗೊಂಡು ಡಾಕ್ಟರರುಗಳವರೆಗೆ ಎಲ್ಲರ ಮನಸ್ಸಿನಲ್ಲಿ ಗಾಢವಾಗಿತ್ತು. ಇದರ ಸಂಬಂಧದಲ್ಲಿ ಹಳ್ಳಿಗಾಡಿನ ಸಾಮಾಜಿಕ-ಸಾಂಸ್ಕೃತಿಕ ಸಂದರ್ಭವನ್ನು ಗಣನೆಗೆ ತಂದುಕೊಂಡು ಸೂಕ್ಷ್ಮ ಆಯಾಮಗಳನ್ನು ಗುರುತಿಸುವ ಮನಸ್ಸು ಅಲ್ಲಿರಲಿಲ್ಲ.

ನಮ್ಮ ಆರ್ಟಿಸ್ಟ್‌ಗಂತೂ ಎಷ್ಟು ಬಾರಿ ಬದಲಾಯಿಸಿದರೂ ಬಹು ಸಂಬಂಧಗಳ ಹೆಂಗುಸಲ್ಲಿನ ಲೈಂಗಿಕ ಪ್ರಚೋದನ ಕಾರಿ ಭಂಗಿಗಳನ್ನು ನಿರಾಕರಿಸಲು ಸಾಧ್ಯವೇ ಆಗುತ್ತಿರ ಲಿಲ್ಲ. ಆಕೆ 'ಲೈಂಗಿಕ ವಸ್ತು' ಎಂದೇ ಮನದಲ್ಲಿ ಅಚ್ಚೊತ್ತಿಸಿಕೊಂಡಿದ್ದರು. ಹೆಂಗಸೊಬ್ಬಳ ಬಹು ಸಂಬಂಧಗಳನ್ನು ಸಹಜವಾಗಿ ತೆಗೆದುಕೊಳ್ಳುವುದು ಸಾಧ್ಯ ವಾಗದೇ ಹೋಗುವುದು ಮತ್ತು ಬಹುಸಂಬಂಧಗಳನ್ನು ಹೊಂದುವುದೂ ಒಂದು ಸಮಸ್ಯೆಯೇ ಆಗಿರುವುದನ್ನು (ಉದಾ : ದೇವದಾಸಿ) ನೋಡಲು ಸಾಧ್ಯವಾಗದೇ ಹೋಗುವುದು ನಮ್ಮೊಳಗೆ ಕೆಲಸ ಮಾಡುತ್ತಿರುವ ಪುರುಷ ಮನಸ್ಸಿನ ಕಿತಾಪತಿಯಲ್ಲವೇ ?

ದೊಡ್ಡ ಪ್ರಮಾಣದಲ್ಲಿ ಮಹಿಳಾ ಅಭಿವೃದ್ಧಿಯಲ್ಲಿ ತೊಡಗಿಕೊಂಡಿದ್ದ ಮಹಿಳಾ ಸಂಸ್ಥೆಯೊಂದು ನನ್ನ ಗಮನ ಸೆಳೆದಿತ್ತು. ಸಂಸ್ಥೆಗಳ ಒಳರಚನೆಯೇ ಪುರುಷ ಸ್ವರೂಪೀ ಎಂದೂ ತಮ್ಮ ಸಂಸ್ಥೆ ಒಂದು ಸ್ತ್ರೀ ಸ್ವರೂಪೀ ಒಳ ರಚನೆಯನ್ನು (ಅಥವಾ ಪುರುಷವಲ್ಲದ್ದು) ಸೃಷ್ಟಿಸಿ ಕೊಳ್ಳಲು ಪ್ರಯತ್ನಿಸುತ್ತಿರುವುದಾಗಿ ಸಂಸ್ಥೆಯ ಸ್ಥಾಪಕಿ ಪದೇ ಪದೇ ಹೇಳುತ್ತಿದ್ದರು. ಸ್ತ್ರೀವಾದೀ ಸಿದ್ಧಾಂತಕ್ಕೆ ಪಕ್ಕಾದ ಆಕೆ ಕಾಲಾಂತರದಲ್ಲಿ ಅನೇಕ ಸ್ತ್ರೀ ಪ್ರಜ್ಞೆಯ ಚಿಂತನೆಗಳನ್ನು ಸಂಸ್ಥೆಯೊಳಕ್ಕೆ ಪರಿಚಯಿಸಿದ್ದರು. ಒಮ್ಮೆ ಹೀಗೇ ಮಾತನಾಡುತ್ತಾ ಮುಂದೆ ಸಂಸ್ಥೆಯನ್ನು ಎಂತಹವರು ಪ್ರತಿಧಿಸಬಲ್ಲರೆಂಬ ಮಾತು ಬಂದಾಗ ಆಕೆ, ಸಂಸ್ಥೆಯೊಳಗಿನ ಆಕರ್ಷಕ ವ್ಯಕ್ತಿತ್ವದ, ಆಕರ್ಷಕವಾಗಿ ಮಾತನಾಡಬಲ್ಲ ಒಂದಿಬ್ಬರನ್ನು ಹೆಸರಿಸಿ, ಸಂಸ್ಥೆಯನ್ನು ಪ್ರತಿನಿಧಿಸಲು ಇಂತವರೇ ಸರಿಯಾದವರೆಂದು ತಾವು ಭಾವಿಸುವುದಾಗಿ ಹೇಳಿದರು. 'ಸ್ತ್ರೀ ಸ್ವರೂಪಿ' ಸಂಸ್ಥೆಯ 'ಸ್ತ್ರೀ ಪ್ರಜ್ಞೆಗೆ' ನಾನು ದಿಗ್ಭ್ರಾಂತಿಗೊಂಡೆ. ಏನೆನ್ನ ಬೇಕು ಇಂತಹ ಧೋರಣೆಯನ್ನು ? ವಿಮರ್ಶೆಯ ಕೊರತೆಯೆನ್ನಬೇಕೆ ? ಪುರುಷ ಪ್ರಪಂಚದಲ್ಲಿ ಬದುಕುಳಿಯುವಲ್ಲಿನ ಅನಿವಾರ್ಯ ರಾಜಿ ಎನ್ನಬೇಕು ? ಇನ್ನೂ ಮುಂದುವರೆದು ಹಿಪಾಕ್ರಸಿ ಎನ್ನಬೇಕೆ ?

ಇನ್ನು ಸ್ತ್ರೀವಾದೀ ಸಾಹಿತ್ಯ, ಸ್ತ್ರೀವಾದೀ ವಿಮರ್ಶಾ ಕ್ರಮಗಳಲ್ಲಂತೂ ಪುರುಷ ಮನಸ್ಸು ಹಾಸು-ಹೊಕ್ಕೇ ಪಡೆದಿರುತ್ತದೆ. ಒಂದು ಉದಾ : ಪುಸ್ತಕ ವಿಮರ್ಶೆಗೆಂದೇ ರಾಷ್ಟ್ರ ಮಟ್ಟದಲ್ಲಿ ಪ್ರಕಟಗೊಳ್ಳುತ್ತಿರುವ ಗಂಭೀರ ಪತ್ರಿಕೆಯೊಂದು ಇತ್ತೀಚೆಗೆ ಸಮಕಾಲೀನ ಕನ್ನಡ ಪುಸ್ತಕ ಗಳ ವಿಮರ್ಶೆಗಳನ್ನೊಳಗೊಂಡ ಸಂಚಿಕೆಯೊಂದನ್ನು ಹೊರತಂದಿತ್ತು. ಇಲ್ಲಿ ಕನ್ನಡದ ಮುಖ್ಯ ಲೇಖಕಿಯೊಬ್ಬರ ಕಥಾ ಸಂಕಲನವೊಂದನ್ನು ವಿಮರ್ಶೆಗೊಳಪಡಿಸಿದ ಒಬ್ಬ ವಿಮರ್ಶಕಿ, ಗಂಡು-ಹೆಣ್ಣಿನ ಸಂಬಂಧದಲ್ಲಿನ ಶೃಂಗಾರ ವನ್ನು ಈ ಲೇಖಕಿ ಸ್ವಲ್ಪವೂ ಹಿಡಿದಿಡುವುದಿಲ್ಲವೆಂದೂ, ಇಂತಹ ಶೃಂಗಾರಮಯ ಆಯಾಮಗಳನ್ನು ಹಿಡಿದಿಡದ ಯಾವುದೇ ಪ್ರಯತ್ನ ಪರಿಪೂರ್ಣ ಹೆಂಗುಸನ್ನು ಸೃಷ್ಟಿಸಲಾರದೆಂದೂ ಟೀಕಿಸಿದ್ದರು. ಶೃಂಗಾರಮಯ ಅನುಭವಗಳನ್ನು ಹಿಡಿದಿಡದಿರುವುದೇ ಆ ಲೇಖಕಿಯಲ್ಲಿನ ಬಹುಮುಖ್ಯ ಕೊರತೆ ಎಂಬುದು ಈ ವಿಮರ್ಶಕಿಯ ಅಭಿಪ್ರಾಯವಾಗಿತ್ತು. ಈ ಲೇಖನವನ್ನು ಗೆಳತಿ ಯೊಬ್ಬರಿಗೆ ಓದಲು ಕೊಟ್ಟೆ, "ಇದು ಪುರುಷ ಮನಸ್ಸಿನ ವಿಮರ್ಶೆ" ಎಂದು ಆಕೆ ಅಸಹನೆಯಿಂದಲೇ ಅಂದರು. ಶೃಂಗಾರ ಮುಂತಾದವು ರಸಜ್ಞತೆಯೊಳಕ್ಕೆ ಸೇರಿಕೊಂಡು ಬಿಡುವುದರಿಂದ ಸಾಹಿತ್ಯದಲ್ಲಿ ಇಂತಹ Mani pulation ಸರಾಗವಾಗಿ ಬಿಡುತ್ತವೆ.

ಇವು ಕೆಲವು ಉದಾಹರಣೆಗಳಷ್ಟೇ. ಇಲ್ಲಿನ ದೃಷ್ಟಿ ಕೋನ ಸೀಮಿತವಾದದ್ದಾಗಿರಬಹುದೆಂಬ ವಿನಯ ಇಲ್ಲಿರುವುದರಿಂದ ಮುಂದುವರೆದ ಚರ್ಚೆಗೆ ಸಂತೋಷದ ಆಹ್ವಾನವಿದೆ.

'ವೀಜಿ'

## ಅಂತ್ಯವಾಗದ ಹೆಣ್ಣು ಶಿಶುಹತ್ಯೆ ಪದ್ಧತಿ

ಆಧುನಿಕ ಪ್ರಪಂಚದಲ್ಲಿ ಮಹಿಳೆ ಇಂದು ಎಲ್ಲಾ ಕ್ಷೇತ್ರ ಗಳಲ್ಲಿ ಕಾಲಿರಿಸಿದ್ದಾಳೆ, ಸ್ವಾವಲಂಬಿಯಾಗಿದ್ದಾಳೆ. ಹಿಂದಿನ ದಿನಗಳಂತೆ 'ಹೆಣ್ಣು' ಇಂದು ಕುಟುಂಬಕ್ಕೆ 'ಹೊರೆ'ಯಾ ಯಾಗೇನೂ ಉಳಿದಿಲ್ಲ, ಆಧುನಿಕ ಯುಗದ ಕುಟುಂಬ ಗಳಲ್ಲಿ ಹೆಣ್ಣು–ಗಂಡು ಇಬ್ಬರೂ ಸರಿಸಮಾನರು.

ಮೇಲ್ನೋಟಕ್ಕೆ ಇದು ಸತ್ಯವೆನಿಸಿದರೂ 'ಹೆಣ್ಣು ಮಗು' ಎಂದರೆ ಮೂಗು ಮುರಿಯುವವರ ಸಂಖ್ಯೆ ಇಂದಿನ ವೈಜ್ಞಾನಿಕ ಯುಗದಲ್ಲೂ ಕಡಿಮೆಯೇನಾಗಿಲ್ಲ. ಹೆಣ್ಣು ಶಿಶುಹತ್ಯೆಯಂತಹ ಅಮಾನವೀಯ ಪದ್ಧತಿಗಳು ಇನ್ನೂ ಕೊನೆಗೊಂಡಿಲ್ಲ.

ಅಧ್ಯಯನವೊಂದರ ಪ್ರಕಾರ ದಕ್ಷಿಣ ಭಾರತದಲ್ಲಿ ಅದ ರಲ್ಲೂ ತಮಿಳು ನಾಡಿನ ಸೇಲಂ ಜಿಲ್ಲೆಯಲ್ಲಿ ಹೆಣ್ಣು ಶಿಶು ಹತ್ಯೆಯ ಪದ್ಧತಿ ಅತಿ ಶೀಘ್ರ ಗತಿಯಲ್ಲಿ ವ್ಯಾಪಕವಾಗಿ ಹಬ್ಬುತ್ತಿದೆ! ಶೇಕಡಾ 51 ರಷ್ಟು ಕುಟುಂಬಗಳಲ್ಲಿ ಹೆಣ್ಣು ಮಗುವನ್ನು ಹುಟ್ಟಿದ ಒಂದು ವಾರದಲ್ಲಿ ಕೊನೆಗಾಣಿಸ ಲಾಗುತ್ತಿದೆ.

ಮದ್ರಾಸ್‌ನ ಸಮುದಾಯ ಸೇವಾ ಸಂಘವು ಪಟ್ನಾ ಮೂಲದ ಅದಿತಿ (ಗ್ರಾಮೀಣ ಮಹಿಳಾ ಅಭಿವೃದ್ಧಿ) ಸಂಸ್ಥೆ (ಮದ್ರಾಸ್ ಶಾಖೆ)ಯೊಂದಿಗೆ ಸೇಲಂನ ಐದು ವಿಭಾಗಗಳಲ್ಲಿ ಈ ವರ್ಷದ ಜನವರಿಯಿಂದ ಜೂನ್ ತಿಂಗಳ ವರೆಗೆ ಸಮೀಕ್ಷೆಯೊಂದನ್ನು ನಡೆಸಿತು.

ತೊಕ್ಕವತಿ ಎಂಬ ಗ್ರಾಮದಲ್ಲಿ, ಕುಟುಂಬದಲ್ಲಿ ಒಂದು ಗಂಡು ಮತ್ತು ಒಂದು ಹೆಣ್ಣು ಮಗುವನ್ನು ಪಡೆದ ನಂತರ ಹುಟ್ಟುವ ಹೆಣ್ಣು ಮಗು ಅಥವಾ ಗಂಡು ಶಿಶು ಹತ್ಯೆ ಮಾಡುವ ಪದ್ಧತಿ ರೂಢಿಯಲ್ಲಿದೆ ಎಂದು ಈ ಸಮೀಕ್ಷೆಯಿಂದ ತಿಳಿದು ಬಂದಿದೆ.

ಬಡತನ ಮತ್ತು ಕುಟುಂಬ ಯೋಜನೆ ಬಗ್ಗೆ ಇರುವ ಅಜ್ಞಾನ ಶಿಶುಹತ್ಯೆ ಸಮಸ್ಯೆಯ ಉಲ್ಬಣಕ್ಕೆ ಮುಖ್ಯ ಕಾರಣವಾಗಿದೆ.

ಸಮೀಕ್ಷೆಯ ಪ್ರಕಾರ ಹೆಣ್ಣು ಶಿಶುಹತ್ಯೆ ಕೇವಲ ಹಿಂದೂ ಜನಾಂಗದಲ್ಲಿ ಮಾತ್ರ ರೂಢಿಯಲ್ಲಿದೆ. "ಇದು ಕೊಲೆ ಎಂಬುದಾಗಿ ನನಗೆ ಗೊತ್ತಿರಲಿಲ್ಲ." ಅಥವಾ "ಎರಡನೇ ಹೆಣ್ಣು ಮಗುವಿನೊಡನೆ ಬರಬೇಡವೆಂದು ಪತಿ ಹೇಳಿದ್ದಾನೆ" ಎಂಬುದು ಬಹಳಷ್ಟು ಮಹಿಳೆಯರ ಸಾಮಾನ್ಯ ಉತ್ತರವಾಗಿದೆ.

ಸುಮಾರು 1,250 ಕುಟುಂಬಗಳಲ್ಲಿ 740 ಕುಟುಂಬ ಗಳು ಮಾತ್ರ ಒಂದು ಹೆಣ್ಣು ಮಗುವನ್ನು ಪಡೆದಿವೆ. 1990ರ ಜನವರಿಯಿಂದ ಈ ವರ್ಷದ ಜನವರಿ ತಿಂಗಳ ವರೆಗೆ ಹೆಣ್ಣು ಶಿಶುಹತ್ಯೆ ಮಾಡಿರುವುದಾಗಿ 111 ಮಹಿಳೆ ಯರು ಒಪ್ಪಿಕೊಂಡಿದ್ದಾರೆ.

ಶಿಶುಹತ್ಯೆಗಾಗಿ ಹಲವಾರು ಕ್ರಮಗಳನ್ನು ಬಳಸಲಾಗು ತ್ತಿದೆ. ಎಳೆ ಮಗುವಿಗೆ ವಿಷಪೂರಿತ ಸಸ್ಯವೊಂದರ ಹಾಲನ್ನು ಉಣಿಸುವುದು ತೀರಾ ಸಾಮಾನ್ಯ ಕ್ರಮ ಎನಿಸಿದೆ. ಈ ಹಾಲು ಕುಡಿದ ಮಗು ಒಂದು ತಾಸಿನ ಅವಧಿಯಲ್ಲಿ ಸಾಯುತ್ತದೆ.

ಸೇಲಂನಲ್ಲಿ ಎರುಕ್ಕಂಬಲ್ ಎಂದು ಕರೆಯಲ್ಪಡುವ ಮತ್ತೊಂದು ಸಸ್ಯವನ್ನು ಕೂಡ ವಿಷವಾಗಿ ಉಪಯೋಗಿಸ ಲಾಗುತ್ತದೆ.

ಭತ್ತದ ಕಾಳುಗಳೊಂದಿಗೆ ಬಿಸಿ ನೀರು ಕುಡಿಸಿ ಹಸುಳೆ ಯನ್ನು ಕೊಲ್ಲುವುದು ಮತ್ತೊಂದು ಕ್ರಮ. ಭತ್ತ ನುಂಗಿದ ಅರ್ಧ ತಾಸಿನಲ್ಲೇ ಮಗು ರಕ್ತವಾಂತಿ ಮಾಡಿ ಕೊನೆಯುಸಿರೆಳೆಯುತ್ತದೆ. ಕೆಲವರು ಮಕ್ಕಳ ಬಾಯಿಗೆ ಭತ್ತವನ್ನು ಬಲವಂತವಾಗಿ ತುಂಬಿ ನಂತರ ನೀರಿನ ಬದ ಲಾಗಿ ಬಿಸಿ ಹಾಲನ್ನು ಕುಡಿಸುವುದೂ ಉಂಟು.

ಇದಲ್ಲದೆ, ಮಗುವಿನ ಬಾಯಿ ಮತ್ತು ಮೂಗನ್ನು ಒತ್ತಿ ಹಿಡಿದು ಉಸಿರುಕಟ್ಟಿಸುವುದು ಅಥವಾ ಒದ್ದೆ ಟವೆಲ್‌ನಿಂದ ಮಗುವಿನ ಮುಖವನ್ನು ಬಿಗಿಯಾಗಿ ಮುಚ್ಚಿ ಉಸಿರು ಕಟ್ಟಿಸುವುದು ಅಥವಾ ಚಳಿಗಾಲದಲ್ಲಿ ಆಗ ತಾನೆ

ಹುಟ್ಟಿದ ಮಗುವನ್ನು ಮನೆಯ ಹಿಂದುಗಡೆ ತೆರೆದ ಜಾಗದಲ್ಲಿಡುವುದು (ಆಗ ಮಗು ಚಳಿಯಿಂದ ಸಾಯುತ್ತದೆ). ಇಂತಹ ಅವಮಾನವೀಯ ಕ್ರಮಗಳನ್ನೂ ಹೆಣ್ಣು ಶಿಶುಹತ್ಯೆಗಾಗಿ ಬಳಸಿಕೊಳ್ಳಲಾಗುತ್ತಿದೆ.

ಹೆಣ್ಣು ಶಿಶುಹತ್ಯೆಗೆ ಬಡತನವೂ ಪ್ರಮುಖ ಕಾರಣವೆಂಬುದನ್ನು ಸಮೀಕ್ಷೆ ಎತ್ತಿ ಹಿಡಿದಿದೆ. ಅಧ್ಯಯನ ನಡೆಸಲಾದ ಶೇಕಡಾ 82ರಷ್ಟು ಕುಟುಂಬಗಳಲ್ಲಿ ವರ್ಷಕ್ಕೆ 18 ಸಾವಿರಕ್ಕಿಂತಲೂ ಕಡಿಮೆ ಪ್ರಮಾಣದ ಸಂಪಾದನೆ ಇರುವುದು ಕಂಡು ಬಂದಿದೆ.

ಸುಮಾರು ಶೇಕಡಾ 90ರಷ್ಟು ಹಿಂದೂಗಳು ಮತ್ತು ಮುಸ್ಲಿಂಮರು, "ಹೆಣ್ಣು ಮಕ್ಕಳಿದ್ದರೆ ಜವಾಬ್ದಾರಿ ಜಾಸ್ತಿವರದಕ್ಷಿಣೆ ಕೊಡಲು ಸಾಧ್ಯವಾಗುವುದಿಲ್ಲ" ಎನ್ನುತ್ತಾರೆ.

ಹೆಣ್ಣು ಮಗುವಿಗಾಗಿ 50 ಸಾವಿರ ರೂಪಾಯಿಗಳನ್ನು ವ್ಯಯಿಸಬೇಕಾಗುತ್ತದೆ. ಎಂಬುದು ಶೇಕಡಾ 40ರಷ್ಟು ಕುಟುಂಬಗಳಲ್ಲಿ ವ್ಯಕ್ತವಾದ ಅಭಿಪ್ರಾಯ.

ಪ್ರಸ್ತುತ ಭಾರತದಲ್ಲಿ ಪ್ರತಿ ಸಾವಿರ ಪುರುಷರಿಗೆ 929 ಮಹಿಳೆಯರಿದ್ದಾರೆ. ವರ್ಷದಿಂದ ವರ್ಷಕ್ಕೆ ಮಹಿಳೆಯರ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಇಳಿಯುತ್ತಿದೆ. ದಾರಿದ್ರ್ಯ ಹೆಚ್ಚುತ್ತಿದೆ. ಪರಿಸ್ಥಿತಿ ಹೀಗಿದ್ದರೂ ನಮ್ಮ ಜನರ ಮನೋಭಾವನೆ ಮಾತ್ರ ಬದಲಾಗದಿರುವುದು ವಿಷಾದನೀಯ.

●

---

## ಮಿಹ್ರಿ ಹಾಟನ್ (1506)

ಈಕೆ ಒಟ್ಟೋಮಾನ್ ಸಾಮ್ರಾಜ್ಯದ ಮೊದಲ ಪ್ರಮುಖ ಕವಯಿತ್ರಿ, ನ್ಯಾಯಾಧೀಶರಾಗಿದ್ದ ಆಕೆಯ ತಂದೆ ಸಹ ಪದ್ಯಗಳನ್ನು ಬರೆಯುತ್ತಿದ್ದರು. ಅರೇಬಿಕ್ ಹಾಗೂ ಪರ್ಷಿಯನ್ ಭಾಷೆಗಳಲ್ಲಿ ಈಕೆ ಪ್ರಭುತ್ವ ಗಳಿಸಿದ್ದಳು. ಆಕೆಯ ಸೌಂದರ್ಯ ದಂತಕಥೆಯಾಗಿತ್ತು. ಅನೇಕ ವರ್ಷಗಳವರೆಗೆ 2ನೇ ಸುಲ್ತಾನ್ ಬಾಯೆಝಿದ್‌ನ ಪುತ್ರ ರಾಜಕುಮಾರ ಅಹ್ಮದ್ ಸುತ್ತಲಿನ ಬೌದ್ಧಿಕ ವಲಯದ ಸದಸ್ಯೆಯಾಗಿದ್ದಳು ಈಕೆ. ಈ ವಲಯದ ಹಲವರ ಜತೆ ಪ್ರೇಮ ಸಂಬಂಧಗಳನ್ನು ಹೊಂದಿದ್ದಳು. ಆಕೆಯ ಪದ್ಯಗಳ ಸಂಗ್ರಹವನ್ನು ಯು. ಎಸ್. ಎಸ್. ಆರ್. ಅಕಾಡೆಮಿ 1967 ರಲ್ಲಿ ಪ್ರಕಟಿಸಿದೆ.

ಒಂದು ಕುಡಿನೋಟ
ಸಾವಿರ ಹೃದಯಗಳೊಂದಿಗೆ
ಪ್ರೀತಿಸಿದೆ ನಾ ನಿನ್ನ
ಕಿಡಿಕಾರಬಹುದು ಅವರು
ನಿನ್ನ ಪ್ರೀತಿ ಬಿಟ್ಟರೆ ಬೇರೆ ಪಾಪ ಮಾಡಿಲ್ಲ
ನನ್ನ ಬಳಿ ಬಾ
ದೂರ ಹೋಗ ಬೇಡ
ಪ್ರೀತಿಸುವುದು ಪಾಪ
ಈ ಮಡಿವಂತರು ಭಾವಿಸಲಿ
ಯೋಚಿಸಬೇಡ
ಆ ಪಾಪದ ನರಕದ
ಬೆಂಕಿಯಲ್ಲೇ ಬೇಯಲು ಬಿಡು

ಮಿಹ್ರಿ ಹಾಟನ್
ಟರ್ಕಿಷ್ ಕವಯಿತ್ರಿ
ಅನು : ಸಿ. ಜಿ. ಮಂಜುಳಾ

○

# ಮಯೂರಿ

ಅವಳ ಹೆಸರು ಮಯೂರಿ. ಅವಳು ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕಿ ಕುಣಿದರೆ ಗೆಜ್ಜೆ ನಾಚುತ್ತಿದ್ದವು. ಅವಳಮ್ಮ ಸುಬ್ರಮಣ್ಯನನ್ನು ಬೇಡಿದ್ದಕ್ಕೆ ಹುಟ್ಟಿದಳಂತೆ. ಅದನ್ನೇ ನಾದರೂ ನಂಬಿದರೆ, ಸುಬ್ರಹ್ಮಣ್ಯ ಅವನ ವಾಹನವನ್ನೇ ಅವಳಮ್ಮನಿಗೆ ಮಗಳಾಗಿ ಕೊಟ್ಟಿರಬೇಕು. ಅಷ್ಟು ಚೆಂದ ಅವಳ ಕುಣಿತ. ಸುಬ್ರಮಣ್ಯನನ್ನು ಬೇಡಿ ಹುಟ್ಟಿದವಳು. ಅದೇ ದೇವರ ಹೆಸರಿಡಬೇಕಲ್ಲ. ಹುಡುಗಿ ಬೇರೆ ! ಸರಿ ಅವನ ವಾಹನವಾದ ನವಿಲನ್ನೇ ಸ್ವಲ್ಪ Modern ಆಗಿ 'ಮಯೂರಿ' ಎಂದು ಕರೆದರು. ಬೆಳೆದಂತೆ ನವಿಲುಗರಿ ಪಳಪಳ ಹೊಳೆದಂತೆ ಹೊಳೆದಳು. ನಾಟ್ಯ ಅವಳ ಉಸಿರಾಯಿತು. ಮೈಯೊಳಗಿನ ರಕ್ತವು ನರ್ತಿಸುವಂತೆ ಹರಿದಾಡಿತು. ನಾಟ್ಯವನ್ನು ನವಿಲಿನಿಂದ ಬಳುವಳಿ ಪಡೆದವಳಂತೆ ನರ್ತಿಸಿದಳು. ಸಾವಿರ ಕಣ್ಣುಗಳಿಗೆ ಹಬ್ಬವಾದಳು.

ಜೋಡಿ ಕಣ್ಣುಗಳು ಕುಣಿತ ಮೆಚ್ಚಿ ಕವಿತೆ ಹಾಡಿದವು. ಕವಿತೆಯ ಒಡೆಯನ ಹೊಳೆವ ಕಣ್ಣುಗಳನ್ನು ಮಯೂರಿ ನೋಡಿಯೇ ನೋಡಿದಳು. ಕಣ್ಣು ತುಂಬಲಿಲ್ಲ. ರಸ್ತೆಯ ಎರಡೂ ಬದಿಯ ಗುಲ್‌ಮೊಹರ್‌ಗಳು ಕೆಂಪನೆಯ ಹೂ ತುಂಬಿ ನಿಂತ ಸಮಯದಲ್ಲಿ "ಕಣ್ಣೊಳಗೆ ಬಚ್ಚಿಡುವೆ ನನ್ನೆದೆಯಂಗಳದಿ ನರ್ತಿಸು ಬಾರೆ ಮಯೂರಿ" ಎಂದು ಕರೆದ 'ವಸಂತ'. ನನ್ನ ನಾಟ್ಯವೆಲ್ಲಾ ವಸಂತಮಯವೆಂದು ಉಬ್ಬಿದಳು ಮಯೂರಿ, ಅವನಿಗಾಗಿ ನರ್ತಿಸಿದಳು ಜೋಗಿನ ರಭಸದ ಜಲಪಾತದೆದುರು. ಬೆಳದಿಂಗಳ ಸಮುದ್ರದ ಅಲೆಗಳೆದುರು, ಕಾಶ್ಮೀರದ ಹೂವಿನ ಕಣಿವೆಯೊಳಗೆ ನರ್ತಿಸಿಯೇ ನರ್ತಿಸಿದಳು. ಹಲವೆಡೆ ನರ್ತಿಸಿದಳು ಒಬ್ಬನೇ ಪ್ರೇಕ್ಷಕನೆದುರು ವಸಂತ ಆನಂದಮಯನಾದ.

ಮೆಲ್ಲನೆ ಉಸಿರು ಸಿಕ್ಕಿಕೊಳ್ಳತೊಡಗಿತು. ಕಟ್ಟಿದ ಗೆಜ್ಜೆಗಳು ಸಣ್ಣಗೆ ನಡುಗಿದವು. ಅವನೆದೆ ಅಂಗಳ ಅವನ ಭುಜಗಳಷ್ಟೂ ವಿಶಾಲವಾಗಿಲ್ಲದ್ದು ಅರಿವಾಗುವ ವೇಳೆಗೆ, ತಲೆಯ ಮೇಲೆ ಬೆಳ್ಳಿಯ ಎಳೆಗಳು ಹಾರಾಡಿದ್ದವು ಕಾಲುಗಳು ಸೋತವು. ಎದೆಯೊಳಗಿನ ನವಿಲು ಕೊಂಚ ಹೊಸ ಗಾಳಿಗೆ ಮೈತೆರೆ ಈಗಲೂ ಕುಣಿವೆನೆಂದು ಕೂಗಿತು. ಕೂಗು ಗೋಡೆಗಳಿಗೆ ಬಡಿದು ಹಿಂತಿರುಗಿತು. ಏನೂ ತೋಚದೆ ಮೌನವಾದಳು. ಸುಮ್ಮನೆ ಕೂರಲಾರದೆ ಮನೆಯನ್ನೆಲ್ಲಾ ಪಳಗುಟ್ಟಿಸಿದಳು. ಕಣ್ಣು ತೂತಾಗುವಷ್ಟು ಹೆಣಿಗೆ ಹಾಕಿದಳು. ಬಣ್ಣಬಣ್ಣದ ಹೊಸ ಹೊಸ ಡಿಸೈನುಗಳು. ಧೂಳೇ ಇಲ್ಲದ ಮೇಜು, ಕುರ್ಚಿ, ಸೋಫಾ, Fridgeಗಳ ಮೇಲಿನ ಧೂಳನ್ನು ಹೊಡೆದೇ ಹೊಡೆದಳು. ಹೂದಾನಿಗಳಲ್ಲಿ ದಿನವೂ ಹೊಸ ಹೂವನ್ನಿಟ್ಟಳು. ಅಡುಗೆ ಮಾಡಿದಳು, ಪಾತ್ರೆ ತೊಳೆದಳು, ಮತ್ತೆ ಅಡುಗೆ, ಮತ್ತೆ ತೊಳೆತ...

ಒಳಗಿನ ನವಿಲು ಸಮಾಧಾನ ಕಳೆದುಕೊಂಡು ಹುಚ್ಚಿದ್ದಿತು. ಎಲ್ಲವು ಬೇಸರ, ಎಲ್ಲವೂ ನೀರಸ. ಎಲ್ಲವನ್ನು ಧೂಳಿಡಿಸಿ ತಾನು ಧೂಳಿಡಿಸಿಕೊಂಡು ಕೂತಳು. ಬೇಸಿಗೆ ಬಂತು, ಮಳೆ ಕಳೆದು, ಚಳಿ ಮುಗಿದು ಮತ್ತೆ ಬೇಸಿಗೆ ಬಂತು. ನಿಗಿ ನಿಗಿ ಬಿಸಿಲು. ಗೇಟು ಸದ್ದಾಯಿತು. ಹೋಗಿ ನೋಡಿದಳು ಮಯೂರಿ. ಪುಟ್ಟ ಹುಡುಗಿ ! ಕಿವಿಯ ಲೋಲಾಕುಗಳನ್ನು ಅಲ್ಲಾಡಿಸುತ್ತಾ "ಆಂಟೀ ! ಸ್ವಲ್ಪ ನೀರ್ ಕೊಡ್ತೀರಾ ? ತುಂಬಾ ಬಾಯಾರಿಕೆ" ಅಂತು. ಮಯೂರಿಗೆ ಉತ್ಸಾಹ ಬಂದಂತಾಗಿ, ಸರಸರನೆ ಒಳಗೆ ಹೋಗಿ. ಚೊಂಬು ಲೋಟ ಬೆಳಗಿ ನೀರು ತಂದು ಕೊಟ್ಟಳು. ಹುಡುಗಿ ನೀರು ಕುಡಿಯುವುದನ್ನು ನೋಡುತ್ತಾ ನಿಂತಳು. ನೀರು ಕುಡಿದ 'ಹುಡುಗಿ ಬರ್ತೀನಿ ಆಂಟೀ' ಅಂತು. ಅಯ್ಯೋ ಹೋಗೆ ಬಿಡುತ್ತಲ್ಲಾ ಅನಿಸಿ, 'ನೀರು ಬೇಕಾದಾಗಲೆಲ್ಲಾ ಬಾಮ್ಮ'ಅಂದಳು.ತಲೆಯಾಡಿಸಿ ಹೋಯಿತು ಹುಡುಗಿ. ನಾಳೆಯೂ ಅದೇ ಹೊತ್ತಿಗೆ, ಇನ್ನೆರಡು ಮಕ್ಕಳೊಂದಿಗೆ, ಪುಟ್ಟ ಹುಡುಗಿ ನೀರಿಗೆಂದು ಬಂದಳು. "ಆಂಟೀ ನಮ್ ಸ್ಕೂಲಲ್ಲಿ ಚೆನ್ನಾಗಿರೋ ನೀರೆ ಇಡೋಲ್ಲ, ನಮ್ಮಣ್ಣಂಗೆ ಗಂಟ್ಲು ನೋವು, ಅಮ್ಮ ಅಲ್ಲಿ ಇಲ್ಲಿ ನೀರು ಕುಡಿಬೇಡಿ ಅಂದಿದಾಳೆ. ಅದಕ್ಕೆ ಬಂದ್ವಿ. ಇವನು ನಮ್ಮಣ್ಣ, ಇವಳು ನನ್ ಫ್ರೆಂಡು" ಎಂದು ಉಳಿದಿಬ್ಬರನ್ನು ಪರಿಚಯಿಸಿದಳು. ಖುಷಿಯಾಗಿ ಎಲ್ಲರಿಗೂ ನೀರು ತಂದು ಕೊಟ್ಟಳು ಮಯೂರಿ. ನೀರು ಕೊಡುವ ಕೆಲಸ ದಿನವೂ ಮುಂದುವರೆಯಿತು. ಮಕ್ಕಳಿಗಾಗಿ, ಆಸ್ಥೆಯಿಂದ ನೀರು ಕುದಿಸಿ,ಆರಿಸಿಟ್ಟುಕೊಂಡು, ಕಾದು ಕುಳಿತುಕೊಳ್ಳುತ್ತಿದ್ದಳು ಮಯೂರಿ. ಗೇಟಿನ ಬಳಿ ನೀರು ಕುಡಿದು

ಹೋಗುತ್ತಿದ್ದ ಮಕ್ಕಳು ಕಾಂಪೌಂಡಿನೊಳಗೆ ಬಂದು ಆಡಲು ಸುರು ಮಾಡಿದವು. ಮಯೂರಿ, ಮಕ್ಕಳಿಗೆಂದು ಖಾಲಿ ಜಾಗದಲ್ಲಿ ಸೀಬೆ ಗಿಡ ನೆಟ್ಟಳು. ಮಲ್ಲಿಗೆ,ಪಾರಿಜಾತ ಬೆಳೆಸಿದಳು. ಕೂರಲೆಂದು ಮೆತ್ತನೆ ಹುಲ್ಲು ಬೆಳೆಸಿದಳು. ಖಾಲಿ ಜಾಗ ಹಸಿರಿನಿಂತ ನಳನಳಿಸಿತು. ಮಕ್ಕಳು ಖುಷಿಯಾಗಿ ಆಡಿದವು.

ಒಂದು ದಿನ ಪುಟ್ಟ ಹುಡುಗಿ ಆಂಟೀ, ನಾಳೆಯಿಂದ ಸ್ವಲ್ಪ ದಿನ ಬರಲ್ಲ, ನಮ್ ಸ್ಕೂಲ್ ಡೇಗೆ ಡ್ಯಾನ್ಸ್ ಹೇಳಿ ಕೊಟ್ಟಿದ್ದಾರೆ, ದಿನಾ ಮನೆಗೋಗಿ Practice ಮಾಡ್ಬೇಕು ಅಂತು.

'ಏನ್ ಡ್ಯಾನ್ಸ್ ಮರಿ' ?

ಅದೇ "ಗಗನದೊಡಲು ಗುಡುಗು ಸಿಡಿಲು" ಹಾಡಿಗೆ ಡ್ಯಾನ್ಸು ಆಂಟಿ, ಅದ್ರಲ್ಲಿ ನಾನು ನವಿಲು, ನವಿಲಿನ ಹಾಗೆ ಡ್ಯಾನ್ಸ್ ಮಾಡಬೇಕು.

ನವಿಲಿನ ಥರಾ ಡ್ಯಾನ್ಸ್! ಮಯೂರಿಗೆ ರೋಮಾಂಚನ ವಾಯ್ತು. ಒಳಗಿನ ನವಿಲು ತಲೆ ಕೊಡವಿ ನಿಂತಿತು. 'ಅಯ್ಯೋ ಪುಟಾಣಿ ಅದಕ್ಯಾಕೆ ಮನೆಗೆ ಬೇಗ ಹೋಗ್ಬೇಕು, ಡ್ಯಾನ್ಸ್ ಇಲ್ಲೇ Practice ಮಾಡು. ನವಿಲು ಥರಾ ಡ್ಯಾನ್ಸ್ ಮಾಡೋದನ್ನ ನಾನೇ ಹೇಳ್ಕೊಡ್ತೀನಿ.ನಂಗೆ....' ನಂ...ಗೆ ಡ್ಯಾನ್ಸ್ ಬರುತ್ತೆ, ನಾನು ಡ್ಯಾನ್ಸ್ ಕಲ್ತಿದೀನಿ.

'ಹೌದಾ ! ಆಂಟಿ ನಂಗೆ ಡ್ಯಾನ್ಸ್ ಅಂದ್ರೆ ಇಷ್ಟಾ, ದಿನಾ Practice ಮಾಡೋಕೆ ಬರ್ಲಾ ? ನಂಗೇ ಹೇಳಿ ಕೊಡ್ತೀರಾ ?' ಕಣ್ಣರಳಿಸಿ ಕೇಳಿದಳು ಪುಟ್ಟ ಹುಡುಗಿ.

ಆ ಹುಡುಗಿಯ ಕಣ್ಣ ಮಿಂಚಿಗೆ ಉಲ್ಲಾಸಗೊಂಡು ಗರಿಕೆದರಿ ಹೆಜ್ಜೆ ಸರಿಮಾಡಿಕೊಂಡಿತು ಒಳಗಿನ ನವಿಲು.

●

**ಸರಸ್ವತಿ ಡು.**

---

## ಪ್ರಿಯ ಓದುಗರಲ್ಲಿ

ನಿಮ್ಮ ಚಂದಾ ಹಣದ ಅವಧಿ ಮುಗಿದ ತಿಂಗಳಲ್ಲಿ ಚಂದಾ ಹಣವನ್ನು ನವೀಕರಿಸಬೇಕೆಂದು ಹಾಗೂ ಪತ್ರಿಕೆಯ ಚಂದಾದಾರರಾಗುವಂತೆ, ಮನವಿ ಪತ್ರವನ್ನು ಬರೆಯ ಲಾಗುತ್ತದೆ. ಆ ತಿಂಗಳಲ್ಲಿ ಅಥವಾ ಮುಂದಿನ ತಿಂಗಳಲ್ಲಿಯೇ ಚಂದಾ ಹಣವನ್ನು ಕಳಿಸಿಕೊಡಬೇಕೆಂದು ಮನವಿ ಮಾಡುತ್ತೇವೆ. ಚಂದಾ ಹಣ ತಲುಪದಿದ್ದಲ್ಲಿ ಪತ್ರಿಕೆಯನ್ನು ಕಳಿಸಿಕೊಡಲು ಸಾಧ್ಯವಾಗುವುದಿಲ್ಲ. ಸಹೃದಯ ಓದುಗರು ಸಹಕರಿಸಬೇಕಾಗಿ ಕೋರುತ್ತೇವೆ.

**ಮಾನಸ**

# ಬಾಲೆಯ ಅಳಲು

ಗೆಳೆಯರೊಡನೆ
ಆಡಲು ನಾನು
ಗದರುವೆ ಏಕೆ
ಅವ್ವಾ ನೀನು ?
ಜೋಳವ ಕುಟ್ಟಿ
ರೊಟ್ಟಿಯ ತಟ್ಟಿ
ಆಡುವೆನಾದರೂ
ಬೈಗುಳ ಗಟ್ಟಿ (!)

ಮನಸಿದು ನನ್ನದು
ತುಟತುಟ ಎನ್ನಲು
ತೋಟವ ಸುತ್ತಿ
ಮರವನು ಹತ್ತಿ
ಆಡದೆ ನಾನು
ಇರುವೆನೆ ಹೇಳು ?

ಬರಿದೆ ಏಕೆ
ಬಯ್ಯುವೆ ನನ್ನ
ಬಾಲ್ಯದ ದಿನವಿದು
ಹಿಗ್ಗಿನ ನಲಿವು
ಕೂಡಿ ಕಲೆಯಲು
ಹೊರಡುವ ನನ್ನ
ದುಡಿತಕೆ ಹಚ್ಚುವುದೇನು ಚೆನ್ನಾ ?

ಸರಿಕರೊಡನೆ
ಆಡಬಾರದ ಶಿಕ್ಷೆ
ಹೇಳೇ ಅವ್ವಾ
ಯಾವ ತಪ್ಪಿಗೆ
ನನಗೀ ರಕ್ಷೆ !?

–ಮಂದಾಕಿನಿ

# ಸ್ತ್ರೀ ಸಂಚಯ

ಸೀತೆ–ರಾಮ–ರಾವಣ (ಕಾದಂಬರಿ)
ಲೇಖಕಿ : **ಎಚ್. ವಿ. ಸಾವಿತ್ರಮ್ಮ**
ಪ್ರಕಾಶಕರು : **ಕಾವ್ಯಾಲಯ, ಮೈಸೂರು**
ಪ್ರಥಮ ಮುದ್ರಣ 1980

ಕೌಸಲ್ಯೆ ಬೆಚ್ಚಿದಳು ನಿಜ, ಅವಳ ಮಾತು ಅಕ್ಷರಶಃ ನಿಜ ಏನನ್ನಾದರೂ ಪಾಲು ಮಾಡಿಕೊಳ್ಳಲು ಹೆಣ್ಣು ಒಪ್ಪಬಹುದು. ಆದರೆ, ಗಂಡನಲ್ಲಿ ಪಾಲು ! ತನ್ನ ಸ್ಥಿತಿಯಾದರೂ ಏನು ? ಗಂಡನ ಸಾಮಿಪ್ಯವಿದೆಯೆ, ಸಾಧ್ಯವಿದೆಯೆ ? ಪಟ್ಟಮಹಿಷಿಯಾಗಿರಬಹುದು. ಬೇಕು ಬೇಕಾದ ವಸ್ತ್ರಾಭರಣಗಳಿರಬಹುದು. ಸುಖ ಭೋಜನವಿರಬಹುದು ! ಸುಪ್ಪತ್ತಿಗೆಯಿರಬಹುದು ಆದರೆ ಇಷ್ಟರಿಂದ ತೃಪ್ತಿಪಡಲು ಆಕೆಯೊಂದು ಪಶುವಲ್ಲ, ನಾಯಿಯಲ್ಲ. ಪ್ರೀತಿ ತೋರಿಸದ ಪತಿಯ ಮನೆಯಲ್ಲಿ ತೊಟ್ಟು ನೀರು ಕೂಡ ಗಂಟಲಲ್ಲಿ ಇಳಿಯುವುದು ಕಷ್ಟ. (ಪುಟ 1–2)

ಕೌಸಲ್ಯೆಯ ಮನಸ್ಸು ಕುದಿಯುತ್ತಿತ್ತು. ಮತ್ತೊಂದು ವಿವಾಹ ಬೇಕಾದರೆ ಮಾಡಿಕೊಳ್ಳಲಿ. ತನ್ನೊಡನೆ ಹೇಳಿ. ತನ್ನ ಅನುಮತಿ ಪಡೆದು ಮಾಡಿಕೊಳ್ಳಬಹುದಾಗಿತ್ತು. ರಾಜರಲ್ಲಿ ಬಹು ಪತ್ನೀತ್ವ ಅಪರೂಪವಾದುದೇನಲ್ಲ. ರಾಜರೆಂದರೇನು ! ಗಂಡಸರ ಮನೋವೃತ್ತಿಯೇ ಹಾಗೆ. ಒಂದೇ ಹೆಣ್ಣಿನಲ್ಲಿ ಎಲ್ಲಾ ಸುಖವನ್ನೂ ಕಂಡುಕೊಳ್ಳುವವರು ವಿರಳ. ಕೌಸಲ್ಯೆಗೆ ಜಿಗುಪ್ಸೆಯಾಯಿತು. ಈ ಮದುವೆಯಾದಂದಿನಿಂದ ದಶರಥ ಆಕೆಯ ಬಳಿಗೆ ಬಂದೇ ಇರಲಿಲ್ಲ. (ಪುಟ 3)

ಗೌರಿ ನೀನೂ ಹೆಣ್ಣು, ನಾನೂ ಹೆಣ್ಣು. ಅರಮನೆಯಾದರೇನು. ಬಡ ಗುಡಿಸಿಲಾದರೇನು? ಪತಿಪ್ರೇಮದಿಂದ ವಂಚಿತೆಯಾದ ಹೆಂಗಸಿಗೆ ಆ ಮನೆಯೇ ನರಕ, ಕೌಸಲ್ಯೆ ಕಣ್ಣೊರೆಸಿಕೊಂಡಳು. (ಪುಟ 5)

ಕೌಸಲ್ಯೆ ತೀಕ್ಷ್ಣವಾಗಿ "ನಿನಗೆ ಈ ವಂಶದ ಗಂಡಸರ ವಿಚಾರ ತಿಳಿಯದು ಸುಮಿತ್ರಾ. ತಮ್ಮ ಅಹಂಕಾರ ಪ್ರತಿಷ್ಠೆಗಳಿಗೆ ಯಾವ ಕುಂದೂ ಇಲ್ಲದೆ ನಡೆದು ಹೋದರೆ ಸರಿ. ಆ ಸ್ವಾರ್ಥವೆಂಬ ರಥಚಕ್ರದ ಕೆಳಗೆ ಎಷ್ಟು ಹೆಣ್ಣು ಜೀವಗಳು ನಲುಗಿ ನಾಶವಾದರೂ ಅವರಿಗೆ ಲಕ್ಷ್ಯವಿಲ್ಲ." (ಪುಟ 13)

ಒಂದು ಕಾಲದಲ್ಲಿ ತಾನೂ ಹೇಗೇ ಆನೆಯ ಮೇಲೆ ಕುಳಿತು ಪುರಜನರ ಮನ್ನಣೆಯನ್ನು ಸ್ವೀಕರಿಸುತ್ತಾ ಅಯೋಧ್ಯೆಯನ್ನು ಪ್ರವೇಶಿಸಿದ್ದಳು. ಆ ಹೆಮ್ಮೆ ಬಹುಕಾಲ ಉಳಿಯಲಿಲ್ಲ. ಮಕ್ಕಳಿಲ್ಲವೆಂದು ಕೊರಗುತ್ತಿದ್ದ ತನ್ನ ಹೃದಯ ಚೀರುತ್ತಿದ್ದರೂ ಹಿಂದು ಮುಂದು ನೋಡದೆ ದಶರಥ ಒಬ್ಬಳಲ್ಲ ಇಬ್ಬರು ಸವತಿಯರನ್ನು ಕರೆ ತಂದಿದ್ದನು. ತನ್ನ ಹೃದಯದ ನೋವೇ ಅವನಿಗೆ ಅರಿವಾಗಲಿಲ್ಲ. ಆ ದುಃಖದಲ್ಲಿ ತಾನು ಎಷ್ಟು ಏಕಾಕಿನಿಯಾಗಿದ್ದೆನೆಂದು ಆತ ಒಂದು ಬಾರಿ ಕೂಡ ಆಲೋಚಿಸಲಿಲ್ಲ. ವ್ರತೋಪವಾಸಗಳಿಂದ ದೇಹವನ್ನು ಶೋಷಿಸಿದರೂ ಹೃದಯದ ದಾಹವಾರಲಿಲ್ಲ. ಆ ಅವಧಿಯಲ್ಲಿ ದಶರಥನ ಸಾಮಿಪ್ಯ, ಸಾಂತ್ವನಗಳಿಂದ ಮನಸ್ಸಿಗೆ ಸ್ವಲ್ಪವಾದರೂ ಸಮಾಧಾನವಾಗುತ್ತಿತ್ತೋ ಏನೋ. ಇಲ್ಲ, ದಶರಥ ಎದುರಿಗೆ ಕೂಡ ಸುಳಿಯುತ್ತಿರಲಿಲ್ಲ. ಭಗವಂತನ ದಯೆ ಬಂದು ರಾಮ ಜನಿಸುವವರೆಗೆ ಜೀವನವೇ ಅಸಹ್ಯವಾಗಿತ್ತು. (ಪುಟ 63)

ಮದುವೆಗೆ ಮುಂಚೆ ಎಷ್ಟೋ ಸುಂದರವಾದ ಕನಸುಗಳನ್ನು ಹೆಣೆದು ಆನಂದಿಸುತ್ತಿದ್ದವಳು ಊರ್ಮಿಳೆ. ಲಕ್ಷ್ಮಣನನ್ನು ನೋಡಿ ಆಕೆಯ ಸುಖದ ಕಲ್ಪನೆ ಗರಿಗೆದರಿ ಹಾರಿತ್ತು. ಲಕ್ಷಣವಾದ ಮುಖ, ಅಚ್ಚುಕಟ್ಟಾದ ಅಂಗ ಸೌಷ್ಟವ, ವಿಶಾಲ ಕಣ್ಣುಗಳಲ್ಲಿ ಸಹೃದಯತೆ ಸೂಸುತ್ತಿತ್ತು. ತನ್ನ ಸೌಂದರ್ಯಕ್ಕೆ ಅನುರೂಪನಾದ ವರನೆಂದು ಅವಳ

ಹೃದಯ ಹಿಗ್ಗಿ ಹಾಡಿತು. ಆದರೆ ರಾಮನಲ್ಲಿ ಆತನಿಗಿದ್ದ ಅಮಿತ ಭಕ್ತಿ, ಪ್ರೇಮಗಳ ಭಾರವೆಂತಹದೆಂಬುದು ಆಕೆಗೆ ಅಂದು ಹೊಳೆಯಲಿಲ್ಲ. ಆ ಭಾರದಡಿ ತನ್ನ ಸುಂದರ ಸ್ವಪ್ನಗಳು ನಲುಗಿ ಬಾಡಬಹುದೆಂದು ಆಕೆ ನಿರೀಕ್ಷಿಸಲಿಲ್ಲ. ಎಷ್ಟು ಜನರಿಗೆ ಅಣ್ಣಂದಿರಿರುವುದಿಲ್ಲ? ಅಣ್ಣನ ಸ್ಥಾನ ಬೇರೆ, ಹೆಂಡತಿಯ ಸ್ಥಾನ ಬೇರೆ. ಅದನ್ನರಿತುಕೊಳ್ಳುವಷ್ಟು ಪರಿಜ್ಞಾನ ಲಕ್ಷ್ಮಣನಿಗಿದೆಯೆಂದು ಆಕೆ ಭಾವಿಸಿದ್ದಳು. ಹೃದಯ ಯಾವುದೋ ಅವ್ಯಕ್ತ ಭೀತಿಯಿಂದ ನಡುಗಿತು. ತನ್ನ ಸಂಸಾರದ ಕಲ್ಪನೆಯೆಲ್ಲಾ ಕನಸಿನಂತೆ ಕರಗಿ ಹೋಗಬಹುದೆ? ಅತಿ ಸಾಮಾನ್ಯ ಹೆಂಗಸಿಗೆ ಸಿಕ್ಕುವ ತೃಪ್ತಿ ಕೂಡಾ ತನಗೆ ದಕ್ಕದೆ? ಕಣ್ಣೀರಿನ ಹನಿಗಳು ಒಂದರ ಹಿಂದೊಂದು ಜಾರಿ ತಲೆದಿಂಬನ್ನು ತೋಯಿಸಿದವು. ಮಧ್ಯರಾತ್ರಿಯಾದರೂ ಲಕ್ಷ್ಮಣ ಬರಲಿಲ್ಲ. (ಪುಟ 66)

ತಾರೆ ನಕ್ಕು, "ಹೆಂಗಸರಿಗೆ ತಿಳಿಯದೆ ನೀವೇನು ಕೆಲಸ ಮಾಡಬಲ್ಲಿರಿ, ಲಕ್ಷ್ಮಣಾ? ನಿಮ್ಮ ಆತ್ಮ ಪ್ರತಿಷ್ಠೆಗೆ ಧಕ್ಕೆ ಬರದಿರಲೆಂದು ಹೆಂಗಸರು ಯಾವ ವಿಚಾರದಲ್ಲೂ ಕೈಹಾಕದೆ ಸುಮ್ಮನಿದ್ದರೆ ಅವರಿಗೇನೂ ತಿಳಿಯುವುದಿಲ್ಲ ವೆಂದು ಕೊಂಡೆಯಾ? ಪುರುಷರ ವಿಚಾರದಲ್ಲಿ ಪದರ ಪದರವೂ ಹೆಂಗಸರ ದೃಷ್ಟಿಗೆ ಸ್ಪಷ್ಟವಾಗಿ ಕಾಣುತ್ತದೆ. ಆದರೆ ನಿಮ್ಮ ಮನಸ್ಸಿನಲ್ಲಿ ಹೆಂಗಸರನ್ನು ಯಾವ ತೊಂದರೆಗೂ ಸಿಕ್ಕಿಸದೆ ರಕ್ಷಿಸುತ್ತೇವೆಂಬ ಭಾವನೆಯಿರುವ ವರೆಗೂ ಅವರಿಗೇ ಅನುಕೂಲ. ಆ ಭಾವನೆಯ ಉಪ ಯೋಗವನ್ನು ಅವರು ಮಾಡಿಕೊಳ್ಳುತ್ತಾರೆಂಬ ಅರಿವೂ ನಿಮಗಿಲ್ಲ" ಎಂದಳು. (ಪುಟ 222)

ರಾಮನಿಗೆ ತನ್ನ ಯಶಸ್ಸು ಪ್ರತಿಷ್ಠೆ ಗೌರವ ಮುಖ್ಯ. ಲೋಕನಿಂದೆಯನ್ನು ಸಹಿಸಿ ತನ್ನನ್ನು ಅವನು ಆದರಿಸುವ ನೆರಬು ಆಸೆ ಎಂದಿಗೂ ಇಲ್ಲ. ಲೋಕ ಅಲ್ಲಗೆಳೆದರೆ ಅವನು ಹೃದಯಕ್ಕಾತುಕೊಂಡು ಸಂತೈಸುವನೆಂದು ನಿರೀಕ್ಷಿಸು ವಂತಿಲ್ಲ. ರಾವಣನಾದರೋ ತಾನು ಇನ್ನೊಬ್ಬನ ಪತ್ನಿ ಯೆಂದಂತಿದ್ದರೂ, ಲೋಕಕ್ಕೆಲ್ಲಾ ಆದು ತಿಳಿದ ವಿಚಾರ ವಾದರೂ ತನ್ನ ಪ್ರೇಮಭಿಕ್ಷೆಗಾಗಿ ಕಾದು ನಿಂತಿದ್ದ. ಅನು ನಯದಿಂದ ತನ್ನ ಮನಸ್ಸನ್ನು ಮಾರ್ಪಡಿಸಲು ಪ್ರಯತ್ನಿ ಸುತ್ತಿದ್ದ. ಯುದ್ಧದಲ್ಲಿ ರಾವಣ ಸತ್ತು ರಾಮ ತನ್ನನ್ನು ತಿರಸ್ಕರಿಸಿದರೆ ತನಗೇನು ಗತಿ? ಸಾವೇ ಶರಣು. (ಪುಟ 239)

ಅರೆಕ್ಷಣದಲ್ಲಿ ಈ ಮಧುರ ಭಾವನೆ ಮರೆಯಾಗಿ ರಾಮನ ಹುಬ್ಬುಗಂಟಿಕ್ಕಿದುವು. ಛೀ! ಪುನಃ ಸೀತೆಯನ್ನು ಸ್ವೀಕರಿಸುವುದೇ? ಇಷ್ಟು ಕಾಲ ಪರಪುರುಷನ ಆಶ್ರಯದಲ್ಲಿದ್ದ ಆಕೆಯನ್ನು ಪತ್ನಿಯೆಂದು ಪರಿಗ್ರಹಿಸಿದರೆ ಲೋಕವೇನನ್ನಬಹುದು? ಇಲ್ಲ, ಸಾಧ್ಯವಿಲ್ಲ. ತನ್ನ ಹೃದಯ ಸೀತೆಗಾಗಿ ಹಾತೊರೆದರೂ, ಅವಳ ವಿರಹದಿಂದ ಛಿದ್ರಛಿದ್ರವಾಗಿ ಹರಿದು ಹೋದರೂ ಆಕೆಯನ್ನು ಸ್ವೀಕರಿಸುವಂತಿಲ್ಲ. ಸ್ವಂತ ಸುಖಕ್ಕೋಸ್ಕರ ಇಕ್ಷ್ವಾಕು ವಂಶದ ಕೀರ್ತಿಗೆ ಕಳಂಕ ತರುವಂತಿಲ್ಲ. ಜಗತ್ತಿನ ಅಪವಾದಕ್ಕೆ ಸಿಕ್ಕುವಂತಿಲ್ಲ. ಅನಂತ ಸುಖವನ್ನು ತ್ಯಾಗಮಾಡಿ ರಘು ವಂಶವನ್ನು ಲೋಕಕ್ಕೆ ಆದರ್ಶವಾದುದೆನ್ನಿಸಬೇಕು. ತನ್ನ ಸುಖವಾಗಲಿ ಸೀತೆಯ ಸುಖವಾಗಲಿ ಮುಖ್ಯವಲ್ಲ. ತನ್ನ ವಂಶದಲ್ಲಿ ಕಾಲಿಟ್ಟ ತಕ್ಷಣ ಅವಳೂ ತ್ಯಾಗಕ್ಕೆ ಸಿದ್ಧಳಾಗಿಯೇ ಇರಬೇಕು. (ಪುಟ 257)

ಮಂಗಳವಾದ್ಯಗಳ ನಿನಾದ ಅಶೋಕವನವನ್ನೂ ಮುಟ್ಟಿತು. ವರ್ತಮಾನ ಸೀತೆಗೆ ತಿಳಿಸಲು ಅಲ್ಲಿ ರಾಕ್ಷಸ ಕನ್ಯೆಯರೇ ಇರಲಿಲ್ಲ. ಏಕಾಕಿನಿಯಾಗಿ, ಆ ವಿಶಾಲವಾದ ವನದಲ್ಲಿ ಸೀತೆ ಲಂಕೆಗೆ ಬಂದಾಗಿನಿಂದ ಅನುಭವಿಸದ ಒಂಟಿ ತನವನ್ನು ಅನುಭವಿಸಿದಳು. ತನ್ನ ನೆನಪೇ ರಾಮನಿಗುಳಿಯಲಿಲ್ಲವೇನೋ. ಯುದ್ಧದಲ್ಲಿ ವಿಜಯ ಸಾಧಿಸುವುದೇ ಅವನ ಗುರಿಯಾಗಿತ್ತೇನೋ! ಎಂದು ಸೀತೆ ನೊಂದು ಕೊಂಡಳು. (ಪುಟ 315)

## ಸುದ್ದಿ ಸಂಕಲನ

### ಮಾನವೀಯ ತೀರ್ಪು

ಗಂಡನ ಕಿರುಕುಳ ಸಹಿಸಲಾರದೆ ಅವನನ್ನು ಬೆಂಕಿ ಹಚ್ಚಿಕೊಂದ ಕಿರಣ್‌ಜೀತ್ ಅಹುಲುವಾಲಿಯಳನ್ನು, ಬ್ರಿಟಿಷ್ ನ್ಯಾಯಲಯ ಇತ್ತೀಚೆಗೆ ಮುಕ್ತಗೊಳಿಸಿದೆ. ಮೂಲತಃ ಭಾರತೀಯಳಾದ, 36 ವಯಸ್ಸಿನ ಕಿರಣ್ ಜೀತ್ ಸಸೆಕ್ಸ್‌ನ ಕ್ರಾಲೀಯ ನಿವಾಸಿ. 1989 ರಲ್ಲಿ ಗಂಡನನ್ನು ಕೊಂದ ಆಪಾದನೆಯ ಮೇಲೆ ಈಕೆಗೆ ನ್ಯಾಯಲಯ ಜೀವಾವಧಿ ಶಿಕ್ಷೆ ವಿಧಿಸಿತ್ತು. ಮದುವೆಯಾದ 10 ವರ್ಷಗಳ ಕಾಲಾವಧಿಯಲ್ಲಿ ಆಕೆಯ ಗಂಡ ದೀಪಕ್ ಅವಳನ್ನು ಹೊಡೆಯುತ್ತಿದ್ದ, ಕತ್ತು ಹಿಸುಕಿ ಕೊಲ್ಲಲು ಪ್ರಯತ್ನಿಸುತ್ತಿದ್ದ, ಲೈಂಗಿಕವಾಗಿ ಹಿಂಸಿಸುತ್ತಿದ್ದ. ಹಿಂಸೆ ತಡೆಯಲಾರದೆ ಕಿರಣ್‌ಜೀತ್, ಅವನು ಮಲಗಿದ್ದ ಸಮಯದಲ್ಲಿ ಅವನ ಮೇಲೆ ಪೆಟ್ರೋಲ್ ಸುರಿದು ಹಾಸಿಗೆಗೆ ಬೆಂಕಿ ಹಚ್ಚಿದಳು ಕೊಲೆಯ ಆಪಾದನೆಯ ಮೇಲೆ ಆಕೆಗೆ ಜೀವಾವಧಿ ಜೈಲು ಶಿಕ್ಷೆಯಾಯಿತು. ಮಹಿಳಾ ಹಕ್ಕುಗಳಿಗಾಗಿ ದುಡಿಯುವ ಅಲ್ಲಿನ ಮಹಿಳಾ ಚಳುವಳಿಯ ಬೆಂಬಲಿಗರು ಕೇಸನ್ನು ತೆಗೆದುಕೊಂಡರು. ತನಗೆ ಅವನನ್ನು ಕೊಲ್ಲುವ ಉದ್ದೇಶವಿರಲಿಲ್ಲವೆಂದು, ನನಗೆ ಕೊಡುವ ನೋವನ್ನು ಅವನೂ ಅನುಭವಿಸಲೆಂದು ಹಾಗೆ ಮಾಡಿದೆನೆಂದು ಕಿರಣ್‌ಜೀತ್ ಹೇಳಿದಳು. ಕೊಲೆಗೆ ಅನಿವಾರ್ಯವಾಗಿ ಪ್ರೇರೇಪಿಸಲ್ಪಟ್ಟಳೆಂಬ ಮಹಿಳಾ ಚಳುವಳಿಯ ಬೆಂಬಲಿಗರ ಪ್ರತಿವಾದವನ್ನು ನ್ಯಾಯಲಯ ತಿರಸ್ಕರಿಸಿತು.

ಕಿರಣ್‌ಜೀತ್‌ಳು, ಘಟನೆ ನಡೆದಾಗ ಜವಾಬ್ದಾರಿಯುತವಾಗಿ ವರ್ತಿಸುವ ಸ್ಥಿತಿಯಲ್ಲಿರಲಿಲ್ಲವೆಂಬ ಆಧಾರದ ಮೇಲೆ 3 ತಿಂಗಳ ಹಿಂದೆ ಮರುವಿಚಾರಣೆ ಆಜ್ಞಾಪಿಸಲಾಗಿತ್ತು. ಮುಖ್ಯ ನ್ಯಾಯಾಧೀಶರಾದ ಶ್ರೀ ಟೇಲರ್ ರವರು ಈ ಮರುವಿಚಾರಣೆಗೆ ಆಜ್ಞೆ ಇತ್ತಿದ್ದರು. ಮರು ವಿಚಾರಣೆಯಲ್ಲಿ ಕಿರಣ್‌ಜೀತ್ ಅತಿಖಿನ್ನತೆಯಿಂದ ಬಳಲುತ್ತಿದ್ದಳೆಂಬ ಮನವಿಯ ಮೇಲೆ ಆಕೆಯನ್ನು ಬಿಡುಗಡೆ ಮಾಡಲಾಯಿತು. ಸುಮಾರು ಮೂರುವರೆ ವರ್ಷಗಳ ಕಾಲ ಜೈಲು ವಾಸ ಅನುಭವಿಸಿ ಹೊರ ಬಂದ ಕಿರಣ್ ಜೀತ್ ಸಂದರ್ಶನವೊಂದರಲ್ಲಿ ಹೀಗೆಂದಿದ್ದಾಳೆ : "ಇಲ್ಲಿನ ಭಾರತೀಯ ಮಹಿಳೆಯರು ಅನೇಕ ಕಟ್ಟುಪಾಡಿಗೊಳಗಾಗಿದ್ದಾರೆ. ಯಾವಾಗಲೂ ಮನೆಯ ಗಂಡನ ಮರ್ಯಾದೆಯನ್ನು ಎಷ್ಟೇ ಕಷ್ಟವಾದರೂ ಉಳಿಸಬೇಕೆಂದು ಮನೆಯವರು ಒತ್ತಿ ಹೇಳುತ್ತಾರೆ. ಆದರೆ ಹಿಂಸೆಯನ್ನು ಸಹಿಸಿ ಸಹಿಸಿ ಕೊನೆಗೆ ನಾನು ಎಂಥಾ ಸ್ಥಿತಿ ಬಂದು ತಲುಪಿದೆ. ಸಮಾಧಾನದ ವಿಷಯವೆಂದರೆ ಹೊರಬಂದ ನಂತರ ಜನ ನನ್ನನ್ನು ತಿರಸ್ಕರಿಸುವರೆಂಬ ಭಯವಿತ್ತು. ಆದರೆ ಎಲ್ಲರ ಸಹಕಾರ ಬೆಂಬಲ ನನಗ ಧೈರ್ಯ ನೀಡಿದೆ. ಮುಂದೆ ನನ್ನೆರಡು ಗಂಡು ಮಕ್ಕಳಿಗೆ ತಪ್ಪಿಯೂ ಹೆಂಗಸರ ಮೇಲೆ ಕೈ ಮಾಡಬೇಡಿರೆಂದು ಕಲಿಸುವೆ."

### ನ್ಯಾಯಕ್ಕಾಗಿ ಯಾರ ಮೊರೆ ?

ಸೆಪ್ಟೆಂಬರ್ 22ರಂದು ಕಲ್ಕತ್ತೆಯ ಪೋಲ್‌ಬಾಗ್‌ನ ಪೋಲಿಸ್ ಠಾಣೆಯಲ್ಲಿ ನೆಹರ್‌ಬಾನು ಎಂಬಾಕೆಯ ಮೇಲೆ ನಡೆದ ಅತ್ಯಾಚಾರಕ್ಕೆ ಸಂಬಂಧ ಪಟ್ಟಂತೆ ಪೋಲಿಸ್ ಪೇದೆ ನೀಲ್ ಕಮಲ್ ಘೋಷನನ್ನು ಕೈದು ಮಾಡಲಾಗಿದೆ. ಅತ್ಯಾಚಾರವೆಸಗಿದ ಪೇದೆಯೂ ಅಲ್ಲದೆ ಇನ್ನೂ ಐದು ಮಂದಿ ಪೋಲಿಸ್ ಪೇದೆಗಳನ್ನು ಅಮಾನತ್ತಿನಲ್ಲಿಟ್ಟು ಕೈದುಗೊಳಿಸಲಾಗಿದೆ ಎಂದು ಅಲ್ಲಿ ಪೋಲಿಸ್ ಕಮಿಶನರ್ ತುಷಾರ್ ತಾಲೂಕ್‌ದಾಲ್ ಹೇಳಿದ್ದಾರೆ. ನೆಹರ್‌ಬಾನುವನ್ನು ಕರೆದುಕೊಂಡುಬಂದ ಡ್ರೈವರ್ ಮತ್ತು ಪೋಲಿಸ್ ಪೇದೆ ನೀಲ್ ಕಮಲ್‌ನ ರೂಮಿನಲ್ಲಿದ್ದು ಅತ್ಯಾಚಾರವನ್ನು ತಡೆಯಲು ಪ್ರಯತ್ನಿಸದಿದ್ದ ಇನ್ನು ಮೂರು ಮಂದಿ ಪೇದೆಗಳು ಈ ಚಿತಾವಣೆಯಲ್ಲಿ ಶಾಮಿಲಾಗಿದ್ದಾರೆ. ಅವರೂ ಅಪರಾಧವೆಸಗಿದವನಷ್ಟೇ ತಪ್ಪಿತಸ್ಥರೆಂದು ಪೋಲಿಸ್ ಕಮೀಶನ್‌ರವರು ತಿಳಿಸಿದ್ದಾರೆ. ಆದಷ್ಟು ಬೇಗ ಆಪಾದನೆಯ ಪಟ್ಟಿ ತಯಾರಿಸಿ ಘಟನೆಯ ತನಿಖೆ ನಡೆಸಿ ಸಂಬಂಧ ಪಟ್ಟ ಕಾಗದ ಪತ್ರ ತಯಾರು ಮಾಡಿ ನ್ಯಾಯಲಯಕ್ಕೆ ನೀಡುವ ಭರವಸೆ ನೀಡಿದ್ದಾರೆ. ಆದರೂ ಅಂತಿಮವಾಗಿ ಶಿಕ್ಷೆ ವಿಧಿಸಬೇಕಾದ್ದು ನ್ಯಾಯಾಲಯಕ್ಕೆ ಬಿಟ್ಟದ್ದು. ಅತ್ಯಾಚಾರವೆಸಗಿದವರನ್ನು ಕ್ರೂರವಾಗಿ ನಡೆಸಿಕೊಳ್ಳುವ ಪೋಲೀಸರು ಅಪರಾಧಿಗಳಾದ ತಮ್ಮ ಸಹ ಪೇದೆಗಳನ್ನು ಮಾತ್ರ ಅತ್ಯಂತ ಸೌಮ್ಯವಾಗಿ ನಡೆಸಿಕೊಂಡಿದ್ದಾರೆ. ಎಷ್ಟಾಗಲಿ ನ್ಯಾಯ ರಕ್ಷಕರಲ್ಲವೆ !

ನೆಹರ್ ಬಾನು ಈಗ ಲಾಲ್ ಬಜಾರ್‌ನ ಸೇಫ್ ಕಸ್ಟಡಿಯ

ಪ್ರತ್ಯೇಕ ಕೋಣೆಯಲ್ಲಿದ್ದಾಳೆ. ಅವಳೊಡನೆ ಅವಳ ತಾಯಿ ಹಾಗು ಮಗಳು ಜೊತೆಗಿದ್ದಾರೆ. ಈ ಮಧ್ಯೆ ಘಟನೆಯನ್ನು ರಾಜಕೀಯ ಪ್ರಚಾರಕ್ಕಾಗಿ ಬಳಸಿಕೊಳ್ಳುವ ಸಂಚು ನಡೆದಿದೆ. ನೆಹರ್ ಬಾನುವನ್ನು ಭೇಟಿಯಾಗುವವರು ಪ್ರಚಾರದ ಅಬ್ಬರವಿಲ್ಲದೆ ಬರಬೇಕೆನ್ನುವ ಪೊಲೀಸರ ಒಪ್ಪಂದವನ್ನು ಮೀರಿ ಕಾಂಗ್ರೆಸ್‌ನ ಮಮತಾ ಬ್ಯಾನರ್ಜೀ ಜಗಜಗಿಸುವ ಕ್ಯಾಮರಾ ಬೆಳಕಿನ ನಡುವೆ ಪೋಲಿಸರನ್ನು ಭೇಟಿಗಾಗಿ ಒತ್ತಾಯಿಸಿದರು. ಅಲ್ಲಿನ ರಾಜ್ಯ ಸಾರಿಗೆ ಮಂತ್ರಿ ಶ್ಯಾಮಲ್ ಚಕ್ರವರ್ತಿಯವರು ನೆಹರ್‌ಬಾನುವಿನ ತಂಗಿ ಆಯೇಷಾ ಬಾನುವನ್ನು ಭೇಟಿ ಮಾಡಿ 500 ರೂ. ನೀಡಿದ್ದಾರೆ. ಅತ್ಯಾಚಾರಕ್ಕೆ ಪರಿಹಾರಧನವೇ ಇದು ? ಪ್ರಚಾರದ ಗಿಮಿಕ್‌ಗಾಗಿ ಹಣ ನೀಡಿದ ಈ ಘಟನೆಗೆ ಅಲ್ಲಿನ ವಿವೇಕಯುಕ್ತ ಜನ ತೀವ್ರವಾಗಿ ವಿರೋಧಿಸಿದ್ದಾರೆ. ಈ ಈ ರೀತಿಯ ಪ್ರಚಾರಕ್ಕೆ ಬಲಿಪಶುವಾಗುವುದನ್ನು ತಡೆಯಲು, ನೆಹರ್‌ಬಾನುವನ್ನು ಕ್ಷೇಮವಾದ ಜಾಗಕ್ಕೆ ಕಳುಹಿಸುವ ಏರ್ಪಾಡನ್ನು ಪೋಲಿಸರು ಮಾಡುತ್ತಿದ್ದಾರೆ,

ಪೋಲಿಸರು ಶೀಘ್ರ ಗತಿಯಲ್ಲಿ ಸಂಬಂಧಪಟ್ಟ ಕೆಲಸ ಮುಗಿಸುವ ಭರವಸೆ ನೀಡಿದ್ದಾರೆ. ಇನ್ನೂ ತೀರ್ಪು ನೀಡುವ ನ್ಯಾಯಾಲಯದ ಆದೇಯ ನಡಿಗೆ, ಅವಮಾನೀಯ ಘಟನೆಗಳನ್ನೂ ಪ್ರಚಾರಕ್ಕೆ ಬಳಸಿಕೊಳ್ಳುವ ಗಬ್ಬೆದ್ದ ರಾಜಕೀಯ ಪಕ್ಷಗಳು–ಇವೆಲ್ಲದರ ನಡುವೆ ಪರಿಸ್ಥಿತಿಯನ್ನು ಧೈರ್ಯವಾಗಿ ಎದುರಿಸಲು ವಿವೇಚನೆಯುಳ್ಳವರು ಬೆಂಬಲಿಸದಿದ್ದರೆ ನ್ಯಾಯಕ್ಕಾಗಿ ನೆಹರ್‌ಬಾನು ಬಾನಿಗೆ ಮೊರೆ ಮಾಡಬೇಕಷ್ಟೇ !

## ಸ್ತ್ರೀ ದುಡಿಮೆ

ರಾಷ್ಟ್ರದ ಬಹುತೇಕ ಭಾಗಗಳಲ್ಲಿ ಮಹಿಳೆಯರು ಪುರುಷರಿಗಿಂತ ಹೆಚ್ಚು ಕಷ್ಟಪಟ್ಟು ದುಡಿಯುತ್ತಾರೆ ಎಂದು ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆಯ ಹೊಸ ವಿಶ್ಲೇಷಣೆ ತಿಳಿಸಿದೆ.

ಆದರೆ ಮಹಿಳೆಯರು ಪುರುಷರ ಸಮನಾಗಿ ಕೆಲಸ ಮಾಡಿದಾಗ್ಯೂ ಸಮಾನ ವೇತನ ನೀಡುವುದನ್ನು ನಿರಾಕರಿಸಲಾಗಿದೆ.

ಹಲವಾರು ರಾಷ್ಟ್ರಗಳಲ್ಲಿ ಮಹಿಳೆಯರು ಉದ್ಯೋಗ ಕ್ಷೇತ್ರದಲ್ಲಿ ನಿರೀಕ್ಷಿಸಿದ ಲಾಭ ಪಡೆಯಲು ವಿಫಲರಾಗಿದ್ದಾರೆ ಎಂದು ಸಂಸ್ಥೆ ಹೇಳಿದೆ,

ಹಲವಾರು ಬಾರಿ ಮಹಿಳೆಯರು ಸಂಪಾದಿಸುವ ಹಣ ಪುರುಷರಿಗೆ ನೀಡಲಾಗುವ ಹಣದ ಅರ್ಧಕ್ಕಿಂತ ಕಡಿಮೆಯಾಗಿರುತ್ತದೆ ಎಂದೂ ಅದು ತಿಳಿಸಿದೆ.

## ಕೃಷಿಕ ಮಹಿಳೆ ಸಂಶೋಧನಾ ಕೇಂದ್ರ

ಭುವನೇಶ್ವರದಲ್ಲಿ ಕೃಷಿ ಕ್ಷೇತ್ರದಲ್ಲಿರುವ ಮಹಿಳೆಯರಿಗಾಗಿ ರಾಷ್ಟ್ರೀಯ ಸಂಶೋಧನಾ ಕೇಂದ್ರವೊಂದನ್ನು ಸ್ಥಾಪಿಸಲು ಭಾರತೀಯ ಕೃಷಿ ಸಂಶೋಧನಾ ಮಂಡಳಿ ನಿರ್ಧರಿಸಿದೆ.

ಗ್ರಾಮೀಣ ಮಹಿಳೆಯರ ಗಾಣದೆತ್ತಿನಂತಹ ದುಡಿಮೆ ಕಡಿಮೆ ಮಾಡುವಂತಹ ತಂತ್ರಜ್ಞಾನಗಳನ್ನು ರೂಪಿಸುವುದು ಈ ಕೇಂದ್ರದ ಉದ್ದೇಶ ಎಂದು ಕೇಂದ್ರ ಕೃಷಿ ಖಾತೆ ರಾಜ್ಯ ಸಚಿವ ಕೆ.ಸಿ. ಲೆಂಕಾ ಪ್ರಕಟಿಸಿದ್ದಾರೆ.

ಬೆಳೆ ಹಾಗೂ ಜಾನುವಾರು ಉತ್ಪಾದನೆಗೆ ಸಂಬಂಧಿಸಿದಂತೆ ಮಹಿಳೆಗೆ ಸರ್ದಿಷ್ಟವಾದ ತಂತ್ರಜ್ಞಾನಗಳನ್ನು ಗುರುತಿಸಿ, ಪರೀಕ್ಷಿಸಿ, ಅಭಿವೃದ್ಧಿ ಪಡಿಸಲು ಯತ್ನಿಸಲಾಗುವುದು. ಇದಕ್ಕಾಗಿ 1.75 ಕೋಟಿ ರೂಪಾಯಿಗಳನ್ನು ಬಜೆಟ್‌ನಲ್ಲಿ ತೆಗೆದಿರಿಸಲಾಗಿದೆ.

## ಸಿಂಗಪುರ ಪಾರ್ಲಿಮೆಂಟಿಗೆ ಭಾರತೀಯ ಮಹಿಳೆ

ಸಿಂಗಪುರದ ಪಾರ್ಲಿಮೆಂಟಿಗೆ 6 ಸದಸ್ಯರನ್ನು ಸಿಂಗಪುರ ಸರ್ಕಾರ ನೇಮಕಮಾಡಿದೆ. ಇವರಲ್ಲಿ ಭಾರತೀಯ ಮಹಿಳಾ ವೈದ್ಯರು ಒಬ್ಬರು. ಐವತ್ತು ವರ್ಷದ ಕನವಲ್‌ಜಿತ್ ಸೋಯಿನ್ ಎಂಬ ಈ ಮಹಿಳೆ ಆರ್ತೋಪೆಡಿಕ್ ಸರ್ಜನ್.

# ಗಗನಸಖಿಯರ ಸೇವಾವಧಿ ವಯಸ್ಸು-ಮತ್ತೆ ವಿವಾದ

ಏರ್ ಇಂಡಿಯಾ ವಿಮಾನಗಳ ಗಗನಸಖಿಯರ ವಯಸ್ಸು 45ಕ್ಕಿಂತ ಹೆಚ್ಚಿರಬೇಕೆಂಬ ಹೋರಾಟಕ್ಕೆ ಪೂರ್ಣ ಬೆಂಬಲ ನೀಡುತ್ತಾ ಬಂದಿದ್ದ ಕೇಂದ್ರ ಸಚಿವೆ ಮಾರ್ಗರೆಟ್ ಆಳ್ವ ಅವರ ಧೋರಣೆ ಬದಲಾದಂತೆ ಕಂಡು ಬರುತ್ತಿದೆ.

ಸೆಪ್ಟೆಂಬರ್ ಮೊದಲ ವಾರದಲ್ಲಿ ಲಂಡನ್‌ನಿಂದ ನವದೆಹಲಿಗೆ, ಈಗ ಕೇಂದ್ರ ಸಿಬ್ಬಂದಿ ಖಾತೆ ರಾಜ್ಯ ಸಚಿವೆ ಆಗಿರುವ ಮಾರ್ಗರೆಟ್ ಆಳ್ವ ಏರ್ ಇಂಡಿಯಾ ವಿಮಾನದಲ್ಲಿ ಆಗಮಿಸಿದರು. ಈ ವಿಮಾನದಲ್ಲಿ ತಮ್ಮನ್ನು ಉಪಚರಿಸಿದ-ಮೂವರು ಭಾರಿಗಾತ್ರದ ಗಗನಸಖಿಯರನ್ನು ನೋಡಿ ಅವರು ಈ ನಿರ್ಧಾರ ತಳೆದಿದ್ದಾರೆ ಎಂದು ವರದಿಯಾಗಿದೆ,

ಈ ಮಹಿಳೆಯರ ಅಂಗಸೌಷ್ಠವದ ಬಗ್ಗೆ ಆಳ್ವ ಅತೃಪ್ತಿ ವ್ಯಕ್ತಪಡಿಸಿದ್ದಾರೆ. ಇದರಿಂದ ಏರ್ ಇಂಡಿಯಾಗೆ ಮುಂದೆ ಭವಿಷ್ಯ ಇರುವುದಿಲ್ಲ ಎಂಬ ಭೀತಿಯನ್ನೂ ಅವರು ವ್ಯಕ್ತಪಡಿಸಿದ್ದಾರೆ ಎಂದೂ ಹೇಳಲಾಗಿದೆ.

ಅಲ್ಲದೆ ವಿಮಾನ ಯಾನದ ಸೂಪರ್‌ವೈಸರ್ ಅವರನ್ನು ಕರೆದು ತಮ್ಮ ದೂರನ್ನು ಏರ್‌ಲೈನ್ ಆಡಳಿತ ವರ್ಗಕ್ಕೆ ತಲುಪಿಸಬೇಕೆಂದು ಸಚಿವೆ ಹೇಳಿದರೆನ್ನಲಾಗಿದೆ.

ವಿಮಾನಯಾನ ವಲಯದಲ್ಲಿ ಗಗನಸಖಿಯರ ವಯಸ್ಸು ನಿಗದಿ ವಿಚಾರ ಮೊದಲಿನಿಂದಲೂ ವಿವಾದದ ವಿಚಾರವಾಗಿದೆ. ಸೌಹಾರ್ದ ಇತ್ಯರ್ಥವೆಂಬುದು ಸಾಧ್ಯವಾಗಿಲ್ಲ. ಇತ್ತೀಚೆಗಷ್ಟೇ ಕೆಲವು ಸಂಸತ್ ಸದಸ್ಯರೂ ಗಗನಸಖಿಯರು 58ನೆ ವಯಸ್ಸಿನವರೆಗೂ ಸೇವೆ ಸಲ್ಲಿಸಲು ಅವಕಾಶ ಇರಬೇಕೆಂಬ ಬಗ್ಗೆ ಮನವಿಯನ್ನು ಸಲ್ಲಿಸಿದ್ದಾರೆ.

ಸಚಿವೆಯ ಟೀಕೆಗಳ ಬಗ್ಗೆ ಏರ್ ಇಂಡಿಯಾ ವಕ್ತಾರರು ಯಾವುದೇ ಪ್ರತಿಕ್ರಿಯೆ ನೀಡಿಲ್ಲ. ಕಳೆದ 10-15 ವರ್ಷಗಳಲ್ಲಿ ಗಗನಸಖಿಯರಿಗೆ ಅನೇಕ ರಿಯಾಯಿತಿಗಳನ್ನು ಆಡಳಿತ ವರ್ಗ ನೀಡಿದೆ. ಇದರಿಂದ ಗಗನಸಖಿಯರು ತಮ್ಮ ದೇಹತೂಕ ಕಾಪಾಡಿಕೊಳ್ಳುವಲ್ಲಿ ಎಚ್ಚರ ವಹಿಸುತ್ತಿಲ್ಲ ಎಂದು ಅವರು ಆರೋಪಿಸಿದ್ದಾರೆ.

ಏರ್ ಇಂಡಿಯಾದಲ್ಲಿ ಸುಮಾರು 2 ಸಾವಿರ ಗಗನ ಸಖಿಯರು ಹಾಗೂ ಫ್ಲೈಟ್ ಪರ್ಸರ್‌ಗಳಿದ್ದಾರೆ. ಇವರಲ್ಲಿ ಸುಮಾರು 250 ಮಂದಿ ಭಾರಿ ಗಾತ್ರದವರಾಗಿದ್ದಾರೆ ಎಂದೂ ಏರ್ ಇಂಡಿಯಾ ಮೂಲಗಳು ತಿಳಿಸಿವೆ.

●

---

## ಅಕ್ಕ-ಪಕ್ಕ

"ಈವರೆಗೆ ಮಹಿಳೆಯರು ಬರೇ ಪುರುಷರ ಪ್ರತಿಧ್ವನಿಗಳಾಗಿದ್ದರು... ವಿಮುಕ್ತ ಮಹಿಳೆ ಇನ್ನೂ ಭವಿಷ್ಯದ ಕನಸು."— ಎಲಿಜಬೆತ್ ಕ್ಯಾಡಿ ಸ್ಟಾಂಟನ್

[1815-1902] ಚರಿತ್ರಕಾರ್ತಿ, ಲೇಖಕಿ ;
ರಾಷ್ಟ್ರೀಯ ಮಹಿಳಾ ಮತದಾನ ಹಕ್ಕು ಸಂಘದ ಅಧ್ಯಕ್ಷೆ,
1869-1890

ಪುರುಷರು ಭೂಮಿಯಂತೆ ನಾವು ಚಂದ್ರನಂತೆ ; ಅವರೆಡೆ ಒಂದು ಭಾಗ ಮಾತ್ರ ತಿರುಗುತ್ತೇವೆ, ಇನ್ನೊಂದು ಭಾಗ ಇಲ್ಲವೆಂದೇ ಅವರು ಭಾವಿಸುತ್ತಾರೆ.—

ಆಲಿವ್ ಶ್ರೀನರ್
[1855-1920]
ಲೇಖಕಿ, ಸ್ತ್ರೀವಾದಿ

ಮಹಿಳೆಯರು ಮಾನವರನ್ನು ಸೃಷ್ಟಿಸುತ್ತಾರೆ ಎಂಬುದು ನಿಜ. ಆದರೆ ಪುರುಷರು ಮಾತ್ರ ಪುರುಷರನ್ನು ಸೃಷ್ಟಿಸ ಬಲ್ಲರು. ಮಾರ್ಗರೆಟ್ ಮೀಡ್

[1901-1978]

ಅದು ಬರೇ ಭಾವೋದ್ರೇಕದ ಕ್ಷಣವಾಗಿರಲಿಲ್ಲ. ಅದು ನನ್ನಲ್ಲಿ ಹೊಣೆಗಾರಿಕೆಯ ಭಾವನೆ ಮೂಡಿಸಿತು,

**ಬಚೇಂದ್ರಿಪಾಲ್**

(1984ರಲ್ಲಿ ಎವರೆಸ್ಟ್ ಶಿಖರ ಏರಿದ ಪ್ರಥಮ ಭಾರತೀಯ ಮಹಿಳೆ)-ಫ್ರಂಟ್‌ಲೈನ್‌ಪತ್ರಿಕೆ.

ಸಿಗರೇಟು ಜಾಹಿರಾತು ಬಂದ ಕಳೆದ ಎರಡು ವರ್ಷಗಳಿಂದ ನನ್ನ ನಂಬಿಕೆಗಳಿಗೆ ವಿರುದ್ಧವಾದ ಕೆಲಸ ಮಾಡಿದ ಅಪರಾಧಿ ಭಾವಕ್ಕೆ ಒಳಗಾಗಿದ್ದೇನೆ. ನನ್ನ ಬದುಕಿನುದ್ದಕ್ಕೂ ಸಿಗರೇಟ್ ರಹಿತ ಸಮಾಜಕ್ಕಾಗಿ ಕೆಲಸ ಮಾಡಿದ್ದೇನೆ. ನೆರೆಮನೆಯ ಸುಂದರ ಹುಡುಗಿಯ ಪಾತ್ರದ ಇಮೇಜ್‌ನಿಂದ ಬಿಡಿಸಿಕೊಳ್ಳಲು ಹೋರಾಡುತ್ತಿದ್ದ ಸಂದರ್ಭದಲ್ಲಿ ಹತಾಶಳಾಗಿ ಮಾಡಿದ ಕೆಟ್ಟ ನಿರ್ಧಾರ ಇದು.

**ದೀಪ್ತಿ ನವಾಲ್**

# ಗೋರಿ

ಆತ್ಮದ ತುಡಿತಗಳು
ಕೊಂಚ ಅವನು
ಕೊಂಚ ಅವಳು
ಒಂದಷ್ಟು ಜೊತೆಯವರು, ಸೇರಿ ಕೊಂದರು
ಇನ್ನೊಂದಷ್ಟು ಆತ್ಮಹತ್ಯೆಯಾದವು

ಮೆರವಣಿಗೆಯಲಿ
ಸಿಂಗರಿಸಿಕೊಂಡ ಹೆಣ
ಹೂತು ಮಣ್ಣಾಯಿತು
ಮೇಲೊಂದು ಗೋರಿಗೆ
ನಡೆದಿದೆ ಹುನ್ನಾರ

ಅಲೆದಾಡುವ ಆತ್ಮ
ಚೀರಿತು ! ಗೋರಿ ಬೇಡ
ಒಂದು ಮಲ್ಲಿಗೆಯುಂಟಾದರು ನೆಡಿ
ಬೆಡಗಿಯರ ಮುಡಿಯೇರಲಿ

ಹೋಗಲಿ, ಒಂದು ಸೀಬೆ ಗಿಡ !
ರೆಂಬೆ, ಗೊಂಬೆಯ ಮೇಲೆಲ್ಲಾ
ತುಂಟ ಮಕ್ಕಳು ಹತ್ತಿ
ಎಲೆ ಹರಿದು, ಇಚು, ದೋರುಗಾಯಿ
ಕಿತ್ತು, ತಿಂದು, ಕುಪ್ಪಳಿಸಲಿ
ಹೋಗಲಿ ಹಾಗೇ ಬಿಡಿ
ಗರಿಕೆ ಹುಲ್ಲಾಗಲಿ
ದನ, ಕರು ಮೇದರು ಸಾಕು

ಕೇಳದು ಯಾರಿಗೂ ಚೀರಾಟ
ನುಣುಪಿನ ಬಿಳಿಕಲ್ಲಿನ ಗೋರಿ
ಮಿಣುಕು ದೀಪಕ್ಕೊಂದು ಗೂಡು
ಮೇಲೆ ಟ್ರಿಂ ಆಗಿ ಕತ್ತರಿಸಿಟ್ಟ
ಗುಲಾಬಿಗಳು
ಎಲ್ಲವು ಚಕಚಕನೆ ಮುಗಿದವು
ಅಲೆದಾಟ ಮಾತ್ರ ಮುಗಿಯಲಿಲ್ಲ.

ಸರಸ್ವತಿ. ಡು.

REGD. NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ :

**"ಮಾ ನ ಸ"**

ಪಂಚಾಯಿತಿ ರಸ್ತೆ

ಕಾಡುಗೋಡಿ

ಬೆಂಗಳೂರು - 560 067